| | | |
|---|---|---|
| Secondary and Higher Education Cess | 750.00 | 100.00 |
| **TOTAL** | **8,27,250.00** | **1,10,300.00** |

3. Government have considered the proposal of iDeCK and hence the following order.

**GOVERNMENT ORDER NO. IDD 86 DIA 2008 BANGALORE DATED : 24.09.2010**

After careful examination of the proposal Government hereby accords sanction for the release of Rs. 9,37,550.00 to iDeCK towards the fees for Project Management Services for Shimoga Airport Development Project.

2. This amount shall be released under the Head of A/c 5465-01-190-1-05 (Plan)-211 Development of Minor Airports Investment out of the provision of 40.00 crores during 2010-11.

3. The Chief Financial Officer, iDeCK is authorized to draw the above amount on a payees receipt duly countersigned by the Under Secretary to Government, Infrastructure Development, Bangalore.

4. This order issues in accordance with the financial powers delegated to Principal Secretaries/Secretaries vide G.O.No FD 1 TFP 2008 dated 16.5.2008.

By Order and in the name of the Governor of Karnataka,

**K.S.Venugopal**

Under Secretary to Government, (i/c)

P.R. 2510 Infrastructure Development Department.

## ಯುವಜನ ಸೇವಾ ಸಚಿವಾಲಯ

**ವಿಷಯ :** ಶ್ರೀ ಎಂ. ಆರ್. ಮೋಹಿತೆ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆ / ಮರು ವಿಚಾರಣೆಗೆ ವಹಿಸಲ್ಪಟ್ಟ ಆದೇಶವನ್ನು ಹಿಂಪಡೆದು ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ವಾಪ್ರಯು 24 ಯುಇಸೇ 06, ದಿನಾಂಕ: 28–04–2006.
2. ಸರ್ಕಾರದ ಆದೇಶ ಸಂಖ್ಯೆ: ವಾಪ್ರಯು 24 ಯುಇಸೇ 06, ದಿನಾಂಕ: 11–09–2006.
3. ಸರ್ಕಾರದ ಆದೇಶ ಸಂಖ್ಯೆ: ಯುಸೇಇ 24 ಯುಇಸೇ 06, ದಿನಾಂಕ: 07–09–2007.
4. ಶ್ರೀ ಆರ್.ಸಿ. ಇಜಾರಿ, ನಿವೃತ್ತ ನ್ಯಾಯಾಧೀಶರು, ಇವರ ವಿಚಾರಣಾ ವರದಿ ದಿ: 24–11–2008.
5. ಸರ್ಕಾರದ ಆದೇಶ ಸಂಖ್ಯೆ: ಯುಸೇಇ24 ಯುಸೇ 06, ದಿನಾಂಕ: 11–05–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 28–04–2006ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ. ಆರ್. ಮೋಹಿತೆ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) 1957ರ ನಿಯಮ 10(1)(ಡಿ) ರನ್ವಯ ಇಲಾಖಾ ವಿಚಾರಣೆ ಬಾಕಿಯಿರಿಸಿ ಸರ್ಕಾರಿ ಸೇವೆಯಿಂದ ಅಮಾನತುಗೊಳಿಸಲಾಯಿತು. ಮೇಲೆ (2)ರಲ್ಲಿ ಓದಲಾದ ದಿನಾಂಕ: 11–09–2006ರ ಸರ್ಕಾರಿ ಆದೇಶದಲ್ಲಿ ಸದರಿ ಅಧಿಕಾರಿರವರ ಮೇಲೆ ಮಾಡಲಾದ ಆಪಾದನೆಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ, ಅವರನ್ನು ಮತ್ತೆ ಸೇವೆಗೆ ಪುನರ್‌ಸ್ಥಾಪಿಸಿ ಯುವಜನ ಸೇವಾ ಇಲಾಖೆಯ ಉಪ ನಿರ್ದೇಶಕರಾಗಿ ನೇಮಿಸಲಾಯಿತು.

ಶ್ರೀ ಎಂ.ಆರ್. ಮೋಹಿತೆ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರು ಅಚಲ ಸ್ಥಿತಿಯ ವಾಹನಗಳಿಗೂ ಸಹ ಪೆಟ್ರೋಲ್ ಇಂಡೆಂಟ್ ನೀಡಿದ ಹಾಗೂ ಅದರಲ್ಲಿ ಅಕ್ರಮ ಎಸಗಿದ ಹಾಗೂ ಇಂಧನವನ್ನು ದುರುಪಯೋಗಪಡಿಸಿಕೊಂಡ ಒಟ್ಟು 4 ಆರೋಪಗಳಿಗಾಗಿ ಮೇಲೆ (3)ರಲ್ಲಿ ಓದಲಾದ ದಿನಾಂಕ: 07–09–2007ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ, ಶ್ರೀ ಆರ್. ಸಿ. ಇಜಾರಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣಾಧಿಕಾರಿಗಳು ಸಲ್ಲಿಸಿದ ಮೇಲೆ (4)ರಲ್ಲಿ ಓದಲಾದ ದಿನಾಂಕ: 24–11–2008ರ ವಿಚಾರಣಾ ವರದಿಯನ್ನು ಪರಿಶೀಲಿಸಿ, ಅವುಗಳು ಸಮರ್ಪಕವೆನಿಸದ ಕಾರಣ ಮರು ವಿಚಾರಣೆಯನ್ನು ನಡೆಸುವ ಸಲುವಾಗಿ ಮೇಲೆ (5) ರಲ್ಲಿ ಓದಲಾದ ದಿ:11–05–2010ರ ಸರ್ಕಾರಿ ಆದೇಶದಲ್ಲಿ ಶ್ರೀ ಹೆಚ್.ಆರ್.ಸುಧೀರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ಆ ನಂತರದ ಬೆಳವಣಿಗೆಯಲ್ಲಿ ಪ್ರಕರಣವನ್ನು ಪುನರ್ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 24 ಯುಇಸೇ 06 ಬೆಂಗಳೂರು, ದಿನಾಂಕ :22–09–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಂ. ಆರ್. ಮೋಹಿತೆ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರ ವಿರುದ್ಧ ಆರೋಪಗಳ ಕುರಿತು ಮರು ವಿಚಾರಣೆಗೆ ವಹಿಸಲಾದ ದಿನಾಂಕ: 11–05–2010ರ ಸರ್ಕಾರದ ಆದೇಶವನ್ನು ಸರ್ಕಾರವು ಈ ಮೂಲಕ ರದ್ದುಪಡಿಸುತ್ತದೆ ಮತ್ತು ಇವರನ್ನು ಈ ಪ್ರಕರಣದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ. ಈ ವಿಚಾರಣೆಯ ಸಂಬಂಧ ಶ್ರೀ ಎಂ. ಆರ್. ಮೋಹಿತೆ, ಉಪ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಇವರನ್ನು ದಿನಾಂಕ: 28–04–2006 ಮತ್ತು

11–09–2006ರ ಸರ್ಕಾರದ ಆದೇಶಗಳ ಸಂಬಂಧ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100 (3) ರನ್ವಯ ಕರ್ತವ್ಯದ ಮೇಲಿನ ಅವಧಿಯನ್ನು ಪರಿಗಣಿಸುತ್ತದೆ. ಶ್ರೀ ಎಂ. ಆರ್. ಮೋಹಿತೆ, ಉಪ ನಿರ್ದೇಶಕರು, ಇವರು ಅಮಾನತ್ತಿನಲ್ಲಿ ಇಲ್ಲದಿದ್ದಲ್ಲಿ ಮತ್ತು ಈ ವಿಚಾರಣೆ ನಡೆಯದಿದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೂ, ಆ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಯುವಜನ ಸೇವಾ ಇಲಾಖೆ

ಪಿ.ಆರ್. 2511

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಯಾದಗಿರಿಯ ಜವಾಹರ ಶಿಕ್ಷಣ ಮಹಾವಿದ್ಯಾಲಯಕ್ಕೆ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವಂತೆ ಘೋಷಿಸುವ ಬಗ್ಗೆ.

**ಓದಲಾಗಿದೆ :** 1. ನಿರ್ದೇಶಕರು, ಡಿ.ಎಸ್.ಇ.ಆರ್.ಟಿ., ಇವರ ಪತ್ರ ಸಂಖ್ಯೆ:ಶಿತ3/ ಅಲ್ಪಸಂಖ್ಯಾತ/01/06–07, ದಿ: 12–6–2009.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ದಿ: 1–6–2010 ರಂದು ನಡೆದ ಸಭೆಯ ನಡವಳಿ.
3. ಸಮ ಸಂಖ್ಯೆಯ ಸರ್ಕಾರದ ಪತ್ರ ದಿ: 29–7–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ನಿರ್ದೇಶಕರು (ಸಂ ಮತ್ತು ತ), ಡಿ.ಎಸ್.ಇ.ಆರ್.ಟಿ., ಇವರು ಯಾದಗಿರಿಯ ಜವಾಹರ ಶಿಕ್ಷಣ ಮಹಾವಿದ್ಯಾಲಯಕ್ಕೆ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಓದಲಾದ (2)ರ ದಿ: 1–6–2010 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪರಿಶೀಲಿಸಲಾಯಿತು ಹಾಗೂ ಸದರಿ ಶಿಕ್ಷಣ ಮಹಾವಿದ್ಯಾಲಯಕ್ಕೆ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡಲು ತೀರ್ಮಾನಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 174 ಯುಆರ್‌ಸಿ 2009 (1), ಬೆಂಗಳೂರು ದಿನಾಂಕ : 20–9–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಯಾದಗಿರಿಯ ಜವಾಹರ ಶಿಕ್ಷಣ ಮಹಾವಿದ್ಯಾಲಯಕ್ಕೆ 2010–11ನೇ ಶೈಕ್ಷಣಿಕ ಸಾಲಿನಿಂದ ಒಂದು ವರ್ಷದ ಅವಧಿಗೆ ಮಾತ್ರ ಅನ್ವಯವಾಗುವಂತೆ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲಾಗಿದೆ.

**ಷರತ್ತುಗಳು :**

1. ಕಾಲೇಜಿಗೆ ನೀಡಲಾಗಿರುವ ಭಾಷಾ ಅಲ್ಪಸಂಖ್ಯಾತ ಸ್ಥಾನಮಾನದಂತೆ ಮಂಜೂರಾದ ವಿದ್ಯಾರ್ಥಿ ಪ್ರಮಾಣಕ್ಕೆ ಶೇ.75 ರಷ್ಟು ಸೀಟುಗಳಲ್ಲಿ ಶೇ.50 ರಷ್ಟು ಸೀಟುಗಳನ್ನು ಸದರಿ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಹಾಗೂ ಉಳಿದ ಶೇ.50 ರಷ್ಟು ಸೀಟುಗಳನ್ನು ಭಾಷಾ ಅಥವಾ ಇತರೆ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಭರ್ತಿ ಮಾಡತಕ್ಕದ್ದು. ಯಾವುದೇ ಸೀಟುಗಳು ಭರ್ತಿಯಾಗದೇ ಉಳಿದಲ್ಲಿ ಪ್ರವೇಶ ಪರೀಕ್ಷೆ ಮುಕ್ತಾಯವಾಗುವ ಮುನ್ನಾ ಕೇಂದ್ರೀಕೃತ ದಾಖಲಾತಿ ಘಟಕಕ್ಕೆ ಸರಂಡರ್ ಮಾಡತಕ್ಕದ್ದು.
2. ಕಾಲೇಜಿನ ಆಡಳಿತ ಮಂಡಳಿಯು ಮೀಸಲಿರಿಸಿದ ಸೀಟುಗಳಿಗೆ ಭಾಷಾ ಮತೀಯ ಅಲ್ಪಸಂಖ್ಯಾತ ವಿದ್ಯಾರ್ಥಿಗಳನ್ನು ದಾಖಲಿಸಿಕೊಂಡಿರುವ ಬಗ್ಗೆ ಮಾಹಿತಿಯನ್ನು ಡಿ.ಎಸ್.ಇ.ಆರ್.ಟಿ. ಗೆ ನೀಡತಕ್ಕದ್ದು.
3. ಮೇಲೆ ತಿಳಿಸಿರುವ ಷರತ್ತುಗಳನ್ನು ಕಾಲೇಜಿನ ಆಡಳಿತ ಮಂಡಳಿಯು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಮತ್ತು ಯಾವುದೇ ರೀತಿಯ ಉಲ್ಲಂಘನೆಯನ್ನು ಮಾಡಿದಲ್ಲಿ ಮಂಜೂರು ಮಾಡಲಾದ ಅಲ್ಪಸಂಖ್ಯಾತ ಸ್ಥಾನಮಾನವನ್ನು ಹಿಂಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು. ಬಿ. ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

ಪಿ.ಆರ್. 2514

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** 2010–11ನೇ ಶೈಕ್ಷಣಿಕ ಸಾಲಿನಿಂದ ಮೂಡಲಗಿ ಎಜುಕೇಷನ್ ಸೊಸೈಟಿಯ ಬಿ.ಪಿ.ಇಡಿ. ಕಾಲೇಜಿನ ಬಿ.ಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ.

**ಉಲ್ಲೇಖ :** 1) ಕರ್ನಾಟಕ ಸರ್ಕಾರದ ನಡವಳಿ ಸಂಖ್ಯೆ:ಇಡಿ 169 ಯುಕೆವಿ 2010, ದಿ: 11–8–2010.
2) ಎನ್.ಸಿ.ಟಿ.ಇ. ಪತ್ರ ಸಂಖ್ಯೆ: F.SRO/NCTE/B.P..Ed./2010-11/ 20025, ದಿನಾಂಕ: 27–7–2010.
3) ಸಂಸ್ಥೆಯ ಅಧ್ಯಕ್ಷರ ಪತ್ರ ದಿನಾಂಕ: 12–8–2010.

**ಪ್ರಸ್ತಾವನೆ :**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು

ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕು ಮೂಡಲಗಿಯ ಮೂಡಲಗಿ ಎಜುಕೇಷನ್ ಸೊಸೈಟಿಯ ಬಿ.ಪಿ.ಇಡಿ. ಕಾಲೇಜನ್ನು ಬಿ.ಪಿ.ಇಡಿ. ಕೋರ್ಸಿನೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿದೆ. ಉಲ್ಲೇಖ (2)ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ. ಸದರಿ ಕಾಲೇಜನ್ನು ಬಿ.ಪಿ.ಇಡಿ. ಕೋರ್ಸಿನೊಂದಿಗೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ (02 ವಿಭಾಗ) ಪ್ರಾರಂಭಿಸಲು ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಸಂಸ್ಥೆಯ ವತಿಯಿಂದ ಹೊಸ ಬಿ.ಪಿ.ಇಡಿ. ಕಾಲೇಜನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 219 ಯುಕೆವಿ 2010, ಬೆಂಗಳೂರು, ದಿನಾಂಕ : 21–9–2010**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ರ 59ನೇ ಪ್ರಕರಣದ (18)ನೇ ಉಪ ಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ./ಬಿ.ಪಿ.ಇಡಿ. ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **2010–11ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕು ಮೂಡಲಗಿಯ ಮೂಡಲಗಿ ಎಜುಕೇಷನ್ ಸೊಸೈಟಿಯ ಬಿ.ಪಿ.ಇಡಿ. ಕಾಲೇಜಿನ ಬಿ.ಪಿ.ಇಡಿ. ಕೋರ್ಸಿಗೆ 100 (ಒಂದು ನೂರು)(02 ವಿಭಾಗ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು. ಬಿ. ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

ಪಿ.ಆರ್. 2515

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಉಜಿರೆಯ ಎಸ್.ಡಿ.ಎಂ. ಶಿಕ್ಷಣ ಮಹಾವಿದ್ಯಾಲಯಕ್ಕೆ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವಂತೆ ಘೋಷಿಸುವ ಬಗ್ಗೆ.

**ಓದಲಾಗಿದೆ :** 1. ಕಾರ್ಯದರ್ಶಿ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಎಜುಕೇಷನ್ ಸೊಸೈಟಿ (ರಿ), ಇವರ ಪತ್ರ ದಿ: 6–3–2008.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ದಿ: 1–6–2010 ರಂದು ನಡೆದ ಸಭೆಯ ನಡವಳಿ.
3. ಸಮ ಸಂಖ್ಯೆಯ ಸರ್ಕಾರದ ಪತ್ರ ದಿ: 29–7–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಕಾರ್ಯದರ್ಶಿ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಎಜುಕೇಷನ್ ಸೊಸೈಟಿ (ರಿ), ಉಜಿರೆ, ಇವರು ಉಜಿರೆಯ ಎಸ್.ಡಿ.ಎಂ. ಶಿಕ್ಷಣ ಮಹಾವಿದ್ಯಾಲಯಕ್ಕೆ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಓದಲಾದ (2)ರ ದಿ: 1–6–2010 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪರಿಶೀಲಿಸಲಾಯಿತು ಹಾಗೂ ಸದರಿ ಶಿಕ್ಷಣ ಮಹಾವಿದ್ಯಾಲಯಕ್ಕೆ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡಲು ತೀರ್ಮಾನಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 174 ಯುಆರ್‌ಸಿ 2009 (3), ಬೆಂಗಳೂರು ದಿನಾಂಕ : 20–9–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಉಜಿರೆಯ ಎಸ್.ಡಿ.ಎಂ. ಶಿಕ್ಷಣ ಮಹಾವಿದ್ಯಾಲಯಕ್ಕೆ 2010–11ನೇ ಶೈಕ್ಷಣಿಕ ಸಾಲಿನಿಂದ ಒಂದು ವರ್ಷದ ಅವಧಿಗೆ ಮಾತ್ರ ಅನ್ವಯವಾಗುವಂತೆ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲಾಗಿದೆ.

**ಷರತ್ತುಗಳು :**

1. ಕಾಲೇಜಿಗೆ ನೀಡಲಾಗಿರುವ ಭಾಷಾ ಅಲ್ಪಸಂಖ್ಯಾತ ಸ್ಥಾನಮಾನದಂತೆ ಮಂಜೂರಾದ ವಿದ್ಯಾರ್ಥಿ ಪ್ರಮಾಣಕ್ಕೆ ಶೇ.75 ರಷ್ಟು ಸೀಟುಗಳಲ್ಲಿ ಶೇ.50 ರಷ್ಟು ಸೀಟುಗಳನ್ನು ಸದರಿ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಹಾಗೂ ಉಳಿದ ಶೇ.50 ರಷ್ಟು ಸೀಟುಗಳನ್ನು ಭಾಷಾ ಅಥವಾ ಇತರೆ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಭರ್ತಿ ಮಾಡತಕ್ಕದ್ದು. ಯಾವುದೇ ಸೀಟುಗಳು ಭರ್ತಿಯಾಗದೇ ಉಳಿದಲ್ಲಿ ಪ್ರವೇಶ ಪರೀಕ್ಷೆ ಮುಕ್ತಾಯವಾಗುವ ಮುನ್ನಾ ಕೇಂದ್ರೀಕೃತ ದಾಖಲಾತಿ ಘಟಕಕ್ಕೆ ಸರಂಡರ್ ಮಾಡತಕ್ಕದ್ದು.
2. ಕಾಲೇಜಿನ ಆಡಳಿತ ಮಂಡಳಿಯು ಮೀಸಲಿರಿಸಿದ ಸೀಟುಗಳಿಗೆ ಭಾಷಾ ಮತೀಯ ಅಲ್ಪಸಂಖ್ಯಾತ ವಿದ್ಯಾರ್ಥಿಗಳನ್ನು ದಾಖಲಿಸಿಕೊಂಡಿರುವ ಬಗ್ಗೆ ಮಾಹಿತಿಯನ್ನು ಡಿ.ಎಸ್.ಇ.ಆರ್.ಟಿ. ಗೆ ನೀಡತಕ್ಕದ್ದು.
3. ಮೇಲೆ ತಿಳಿಸಿರುವ ಷರತ್ತುಗಳನ್ನು ಕಾಲೇಜಿನ ಆಡಳಿತ ಮಂಡಳಿಯು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಮತ್ತು ಯಾವುದೇ ರೀತಿಯ ಉಲ್ಲಂಘನೆಯನ್ನು ಮಾಡಿದಲ್ಲಿ ಮಂಜೂರು ಮಾಡಲಾದ ಅಲ್ಪಸಂಖ್ಯಾತ ಸ್ಥಾನಮಾನವನ್ನು ಹಿಂಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು. ಬಿ. ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

ಪಿ.ಆರ್. 2516

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಬೆಂಗಳೂರಿನ ಅಲ್–ಅಮೀನ್ ಶಿಕ್ಷಣ ಮಹಾವಿದ್ಯಾಲಯಕ್ಕೆ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವಂತೆ ಘೋಷಿಸುವ ಬಗ್ಗೆ.

**ಓದಲಾಗಿದೆ :** 1. ನಿರ್ದೇಶಕರು, ಡಿ.ಎಸ್.ಇ.ಆರ್.ಟಿ., ಇವರ ಪತ್ರ ಸಂಖ್ಯೆ: ಶಿತ3/ ಅಲ್ಪಸಂಖ್ಯಾತ/05/08–09, ದಿ: 13–1–2010.

2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ದಿ: 1–6–2010 ರಂದು ನಡೆದ ಸಭೆಯ ನಡವಳಿ.

3. ಸಮ ಸಂಖ್ಯೆಯ ಸರ್ಕಾರದ ಪತ್ರ ದಿ: 29–7–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ನಿರ್ದೇಶಕರು (ಸಂ ಮತ್ತು ತ), ಡಿ.ಎಸ್.ಇ.ಆರ್.ಟಿ., ಇವರು ಬೆಂಗಳೂರಿನ ಅಲ್–ಅಮೀನ್ ಶಿಕ್ಷಣ ಮಹಾವಿದ್ಯಾಲಯಕ್ಕೆ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಓದಲಾದ (2)ರ ದಿ: 1–6–2010 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪರಿಶೀಲಿಸಲಾಯಿತು ಹಾಗೂ ಸದರಿ ಶಿಕ್ಷಣ ಮಹಾವಿದ್ಯಾಲಯಕ್ಕೆ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡಲು ತೀರ್ಮಾನಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 174 ಯುಆರ್‌ಸಿ 2009 (2), ಬೆಂಗಳೂರು ದಿನಾಂಕ : 20–9–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರಿನ ಅಲ್ ಅಮೀನ್ ಶಿಕ್ಷಣ ಮಹಾವಿದ್ಯಾಲಯಕ್ಕೆ 2010–11ನೇ ಶೈಕ್ಷಣಿಕ ಸಾಲಿನಿಂದ ಒಂದು ವರ್ಷದ ಅವಧಿಗೆ ಮಾತ್ರ ಅನ್ವಯವಾಗುವಂತೆ ಭಾಷಾ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲಾಗಿದೆ.

**ಷರತ್ತುಗಳು :**

1. ಕಾಲೇಜಿಗೆ ನೀಡಲಾಗಿರುವ ಭಾಷಾ ಅಲ್ಪಸಂಖ್ಯಾತ ಸ್ಥಾನಮಾನದಂತೆ ಮಂಜೂರಾದ ವಿದ್ಯಾರ್ಥಿ ಪ್ರಮಾಣಕ್ಕೆ ಶೇ.75 ರಷ್ಟು ಸೀಟುಗಳಲ್ಲಿ ಶೇ.50 ರಷ್ಟು ಸೀಟುಗಳನ್ನು ಸದರಿ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಹಾಗೂ ಉಳಿದ ಶೇ.50 ರಷ್ಟು ಸೀಟುಗಳನ್ನು ಭಾಷಾ ಅಥವಾ ಇತರೆ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಭರ್ತಿ ಮಾಡತಕ್ಕದ್ದು. ಯಾವುದೇ ಸೀಟುಗಳು ಭರ್ತಿಯಾಗದೇ ಉಳಿದಲ್ಲಿ ಪ್ರವೇಶ ಪರೀಕ್ಷೆ ಮುಕ್ತಾಯವಾಗುವ ಮುನ್ನಾ ಕೇಂದ್ರೀಕೃತ ದಾಖಲಾತಿ ಘಟಕಕ್ಕೆ ಸರಂಡರ್ ಮಾಡತಕ್ಕದ್ದು.
2. ಕಾಲೇಜಿನ ಆಡಳಿತ ಮಂಡಳಿಯು ಮೀಸಲಿರಿಸಿದ ಸೀಟುಗಳಿಗೆ ಭಾಷಾ ಮತೀಯ ಅಲ್ಪಸಂಖ್ಯಾತ ವಿದ್ಯಾರ್ಥಿಗಳನ್ನು ದಾಖಲಿಸಿಕೊಂಡಿರುವ ಬಗ್ಗೆ ಮಾಹಿತಿಯನ್ನು ಡಿ.ಎಸ್.ಇ.ಆರ್.ಟಿ. ಗೆ ನೀಡತಕ್ಕದ್ದು.
3. ಮೇಲೆ ತಿಳಿಸಿರುವ ಷರತ್ತುಗಳನ್ನು ಕಾಲೇಜಿನ ಆಡಳಿತ ಮಂಡಳಿಯು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಮತ್ತು ಯಾವುದೇ ರೀತಿಯ ಉಲ್ಲಂಘನೆಯನ್ನು ಮಾಡಿದಲ್ಲಿ ಮಂಜೂರು ಮಾಡಲಾದ ಅಲ್ಪಸಂಖ್ಯಾತ ಸ್ಥಾನಮಾನವನ್ನು ಹಿಂಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

ಪಿ.ಆರ್. 2517

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಅಂಗನವಾಡಿ ಸಹಾಯಕಿಯರ ಆಯ್ಕೆ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಮಮಇ 242 ಐಸಿಡಿ 2009, ದಿನಾಂಕ: 20–10–2009.

2) ಸರ್ಕಾರಿ ಆದೇಶ ಸಂಖ್ಯೆ: ಮಮಇ 242 ಐಸಿಡಿ 2009, ದಿನಾಂಕ: 01–02–2010.

3) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ಡಿಡಬ್ಲ್ಯೂಸಿ/ಐಸಿಡಿ/ಎಎನ್‌ಜಿ/1/204/2009–10, ದಿನಾಂಕ: 03–06–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಅನುಷ್ಠಾನಗೊಳಿಸುತ್ತಿರುವ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ನಿರ್ವಹಿಸುತ್ತಿರುವ ಅಂಗನವಾಡಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸಬೇಕಾದ ಅಂಗನವಾಗಿ ಸಹಾಯಕಿಯರನ್ನು ಆಯ್ಕೆ ಮಾಡಲು ತಾಲ್ಲೂಕು ಮಟ್ಟದಲ್ಲಿ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯನ್ನು ಪುನರ್ ರಚಿಸಿ ಅಂಗನವಾಡಿ ಸಹಾಯಕಿಯರನ್ನು ಆಯ್ಕೆ ಮಾಡಲು ಅರ್ಹತೆಗಳನ್ನು ನಿಗದಿಪಡಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರಿ ಆದೇಶದಲ್ಲಿ, ಅಂಗನವಾಡಿ ಸಹಾಯಕಿಯರನ್ನು ಆಯ್ಕೆ ಮಾಡಲು ತಾಲ್ಲೂಕು ಮಟ್ಟದಲ್ಲಿ ರಚಿಸಲಾದ ಆಯ್ಕೆ ಸಮಿತಿಯ ಆದೇಶ ಸಂಖ್ಯೆ: ಮಮಇ 242 ಐಸಿಡಿ 2009, ದಿನಾಂಕ: 20–10–2009 ಕ್ಕೆ ತಿದ್ದುಪಡಿ ಮಾಡಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (3)ರ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರ ಪತ್ರದಲ್ಲಿ ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಸಹಾಯಕಿಯರನ್ನು ಆಯ್ಕೆ ಮಾಡಲು ಮಾರ್ಗಸೂಚಿಗಳನ್ನು ನೀಡಲಾಗಿದ್ದು, ಕೆಲವು ವಿಷಯಗಳಿಗೆ ಸಂಬಂಧಪಟ್ಟಂತೆ ಜಿಲ್ಲೆ/ತಾಲ್ಲೂಕುಗಳಿಂದ

ಪದೇ ಪದೇ ಸ್ಪಷ್ಟೀಕರಣ ಕೋರಿ ಪತ್ರಗಳು ಸ್ವೀಕೃತವಾಗುತ್ತಿರುವುದರಿಂದ, ಕ್ರೋಢೀಕೃತವಾದ ಪರಿಷ್ಕೃತ ಮಾರ್ಗಸೂಚಿಗಳನ್ನು ಹೊರಡಿಸುವ ಅವಶ್ಯಕತೆ ಇರುವುದೆಂದು ತಿಳಿಸುತ್ತಾ, ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 242 ಐಸಿಡಿ 2009, ಬೆಂಗಳೂರು, ದಿನಾಂಕ : 27–09–2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಅನುಷ್ಠಾನಗೊಳಿಸುತ್ತಿರುವ ಕೇಂದ್ರ ಪುರಸ್ಕೃತ ಯೋಜನೆಯಾದ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ನಿರ್ವಹಿಸುತ್ತಿರುವ ಅಂಗನವಾಡಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸಬೇಕಾದ ಅಂಗನವಾಡಿ ಸಹಾಯಕಿಯರು ಹೊಂದಿರಬೇಕಾದ ಅರ್ಹತೆ ಮತ್ತು ಆಯ್ಕೆ ಸಮಿತಿಗಳು ಅನುಸರಿಸಬೇಕಾದ ವಿಧಾನಗಳನ್ನು ಅನುಬಂಧದಲ್ಲಿ ತಿಳಿಸಿರುವಂತೆ ಪರಿಷ್ಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ

**(ಸರ್ಕಾರದ ಆದೇಶ ಸಂಖ್ಯೆ: ಮಮಇ 242 ಐಸಿಡಿ 2009, ಬೆಂಗಳೂರು, ದಿನಾಂಕ : 27–09–2010ಕ್ಕೆ)**

1) ಅಂಗನವಾಡಿ ಸಹಾಯಕಿಯು ಸ್ಥಳೀಯ ಮಹಿಳೆಯಾಗಿರಬೇಕು. ಅಂಗನವಾಡಿ ಕೇಂದ್ರ ಸ್ಥಾಪಿಸುವ ವಾರ್ಡ್ / ಮೊಹಲ್ಲಾದ ಪ್ರದೇಶದಲ್ಲೆ ವಾಸಿಸುತ್ತಿರಬೇಕು. 18 ರಿಂದ 44 ವರ್ಷಗಳ ವಯೋಮಿತಿಯೊಳಗಿರತಕ್ಕದ್ದು. ಅಭ್ಯರ್ಥಿಗಳು ಸ್ಥಳೀಯರಾಗಿರಬೇಕಾಗಿದ್ದು ಸಂಬಂಧಪಟ್ಟ ತಹಸೀಲ್ದಾರರಿಂದ ಪಡೆದ ಮೂಲ ವಾಸಸ್ಥಳ ದೃಢೀಕರಣಪತ್ರವನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು.

2) ಅಭ್ಯರ್ಥಿಯು ಬಡತನರೇಖೆಗಿಂತ ಕೆಳಗಿನ ಕುಟುಂಬಕ್ಕೆ ಸೇರಿರಬೇಕು. ಇದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಸಲ್ಲಿಸಬೇಕು. ಒಂದು ವೇಳೆ ಬಿ.ಪಿ.ಎಲ್. ಅಭ್ಯರ್ಥಿಗಳಿಂದ ಅರ್ಜಿ ಬಾರದೇ ಇದ್ದ ಪಕ್ಷದಲ್ಲಿ ಎ.ಪಿ.ಎಲ್. ಅಭ್ಯರ್ಥಿಯನ್ನು ಆಯ್ಕೆ ಮಾಡಬಹುದಾಗಿದೆ.

3) ಕನಿಷ್ಠ 4ನೇ ತರಗತಿ ವಿದ್ಯಾರ್ಹತೆ ಹೊಂದಿರಬೇಕು. 4ನೇ ತರಗತಿ ವಿದ್ಯಾರ್ಹತೆಯುಳ್ಳ ಸ್ಥಳೀಯ ಅಭ್ಯರ್ಥಿ ಲಭ್ಯವಿಲ್ಲದಿದ್ದಲ್ಲಿ ಅರ್ಜಿ ಸಲ್ಲಿಸಿದ ಸ್ಥಳೀಯ ಅಭ್ಯರ್ಥಿಗಳ ಪೈಕಿ ಹೆಚ್ಚಿನ ವಿದ್ಯಾರ್ಹತೆಯುಳ್ಳವರು / ಅಕ್ಷರಸ್ಥ ಮಹಿಳೆಯನ್ನು ಆಯ್ಕೆ ಮಾಡಬೇಕು. 4ನೇ ತರಗತಿ ವಿದ್ಯಾರ್ಹತೆಯುಳ್ಳವರು ಒಂದಕ್ಕಿಂತ ಹೆಚ್ಚು ಅಭ್ಯರ್ಥಿಗಳು ಅರ್ಜಿ ಸಲ್ಲಿಸಿದಲ್ಲಿ ಹೆಚ್ಚು ಅಂಕಗಳಿಸಿದವರನ್ನು ಆಯ್ಕೆ ಮಾಡಬೇಕು. 4ನೇ ತರಗತಿಗಿಂತ ಹೆಚ್ಚು ವಿದ್ಯಾರ್ಹತೆಯುಳ್ಳವರು ಅರ್ಜಿ ಸಲ್ಲಿಸಿದಲ್ಲಿ ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆಗೆ ಮಿತಿಗೊಳಿಸಿ ಎಸ್.ಎಸ್.ಎಲ್.ಸಿ. ಯೊಳಗಿನ ವಿದ್ಯಾರ್ಹತೆಯುಳ್ಳವರ ಪೈಕಿ ಹೆಚ್ಚು ವಿದ್ಯಾರ್ಹತೆಯುಳ್ಳ ಸ್ಥಳೀಯರನ್ನು ಆಯ್ಕೆ ಮಾಡಬೇಕು. ಒಂದೇ ವಿದ್ಯಾರ್ಹತೆಯುಳ್ಳ ಒಂದಕ್ಕಿಂತ ಹೆಚ್ಚು ಅರ್ಜಿ ಬಂದಿದ್ದಲ್ಲಿ ಹೆಚ್ಚು ಅಂಕಗಳಿಸಿದವರನ್ನು ಆಯ್ಕೆ ಮಾಡಬೇಕು. ಎಸ್.ಎಸ್.ಎಲ್.ಸಿ.ಗಿಂತ ಹೆಚ್ಚಿನ ವಿದ್ಯಾರ್ಹತೆಯುಳ್ಳವರನ್ನು ಪರಿಗಣಿಸುವಂತಿಲ್ಲ.

4) ಅಂಗನವಾಡಿ ಸಹಾಯಕಿಯ ಆಯ್ಕೆಗಾಗಿ ಸಂಬಂಧಿಸಿದ ಅಂಗನವಾಡಿ ಕೇಂದ್ರದ ಗ್ರಾಮದವರಿಂದ ಮಾತ್ರ ಅರ್ಜಿಗಳನ್ನು ಕರೆಯಬೇಕು. ಗ್ರಾಮದ ವ್ಯಾಪ್ತಿ ದೊಡ್ಡದಿದ್ದಾಗ ಹೊಸದಾಗಿ ಕೇಂದ್ರ ಪ್ರಾರಂಭಿಸುವ ಕೇಂದ್ರದ ಪ್ರದೇಶ ವ್ಯಾಪ್ತಿಯನ್ನು ಗುರುತಿಸಿಕೊಳ್ಳಬೇಕು. ಆ ಪ್ರದೇಶದ ಜನಸಂಖ್ಯೆಗೆ ಸೀಮಿತಗೊಳಿಸಿ ಅರ್ಜಿಗಳನ್ನು ಆಹ್ವಾನಿಸಬೇಕು. ಈ ಬಗ್ಗೆ ಪ್ರಕಟಣೆಯನ್ನು ಹೊರಡಿಸಿ ಗ್ರಾಮದ ಪ್ರಾಥಮಿಕ ಶಾಲಾ ಕಟ್ಟಡಗಳ ಮೇಲೆ ಹಾಗೂ ಗ್ರಾಮಪಂಚಾಯತ್ ಕಛೇರಿಯ ಸೂಚನಾ ಫಲಕದ ಮೇಲೆ ಪ್ರದರ್ಶಿಸತಕ್ಕದ್ದು, ಹಾಗೂ ಸ್ಥಳೀಯ ದಿನಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸತಕ್ಕದ್ದು. ಹಾಗೂ ಪ್ರಕಟಣೆಯಲ್ಲಿ, ಪ್ರಕಟಣೆ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗೆ ಅರ್ಜಿ ಸಲ್ಲಿಸುವ ಕಾಲಾವಧಿಯನ್ನು ನಿಗದಿಪಡಿಸಿರತಕ್ಕದ್ದು. ಪ್ರಕಟಣೆ ಹೊರಡಿಸುವ ಮುನ್ನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪ್ರಕಟಣೆಗೆ ಸಮಿತಿಯ ಅಧ್ಯಕ್ಷರಾದ ಜಿಲ್ಲಾ ಉಪನಿರ್ದೇಶಕರ ಅನುಮೋದನೆಯನ್ನು ಪಡೆದು ನಂತರ ಪ್ರಕಟಿಸಬೇಕು. ಹಾಗೂ ಪ್ರಕಟಣೆಯ ಪ್ರತಿಯನ್ನು ಆಯ್ಕೆ ಸಮಿತಿಯ ಎಲ್ಲಾ ಸದಸ್ಯರಿಗೂ ಕಳುಹಿಸತಕ್ಕದ್ದು.

ಪ್ರಕಟಣೆಯನ್ನು ಸ್ಪಷ್ಟವಾಗಿ ನಿಖರವಾಗಿ ಹೊರಡಿಸತಕ್ಕದ್ದು. ಹುದ್ದೆ ಖಾಲಿಯಿರುವ ಸ್ಥಳ, ಈ ಹುದ್ದೆ ಜನಸಂಖ್ಯೆ ಆಧಾರದಲ್ಲಿ ಯಾವ ವರ್ಗಕ್ಕೆ ಮೀಸಲಾಗಿದೆ, ಎಂಬ ಬಗ್ಗೆ ತಿಳಿಸಿರಬೇಕು. ಹಾಗೂ ಅರ್ಜಿಗಳು ಯಾವ ನಮೂನೆಯಲ್ಲಿ ಸಲ್ಲಿಸಬೇಕು, ಯಾವ ದಾಖಲೆಗಳನ್ನು ಒದಗಿಸಬೇಕು ಎಂಬ ಬಗ್ಗೆ ಸ್ಪಷ್ಟವಾಗಿ ಪ್ರಕಟಣೆಯಲ್ಲಿ ತಿಳಿಸತಕ್ಕದ್ದು. ಅರ್ಜಿಗಳನ್ನು ಯೋಜನಾ ಕಛೇರಿಯಿಂದ ವಿತರಿಸುವ ಅಗತ್ಯವಿಲ್ಲ. ಅರ್ಜಿಯೊಡನೆ ಸಲ್ಲಿಸಬೇಕಾದ ಪ್ರಮಾಣ ಪತ್ರ/ದಾಖಲೆಗಳ ಕುರಿತಂತೆ ಒಂದು ಚೆಕ್‌ಲಿಸ್ಟ್ ತಯಾರಿಸಿ ಅರ್ಜಿ ಸಲ್ಲಿಸಲು ಅಭ್ಯರ್ಥಿಗಳು ಬಂದಾಗ ಅರ್ಜಿಗಳನ್ನು ಅವರ ಎದುರಿನಲ್ಲಿಯೇ ಪರಿಶೀಲಿಸಿ ಯಾವ ದಾಖಲೆಗಳಿವೆಯೆಂದು ದೃಢಪಡಿಸಿಕೊಂಡು ಅವರು ನೀಡುವ ಪ್ರಮಾಣ ಪತ್ರಗಳನ್ನು ಅದರಲ್ಲಿ ನಮೂದಿಸಿ ಅರ್ಜಿಯನ್ನು ಸ್ವೀಕರಿಸುವ ಅಧಿಕಾರಿಯು ಚೆಕ್‌ಲಿಸ್ಟ್‌ನ ಒಂದು ಪ್ರತಿಯನ್ನು ಅಭ್ಯರ್ಥಿಗೆ ಅರ್ಜಿ ಸಲ್ಲಿಸುವ ಸಮಯದಲ್ಲಿ ನೀಡತಕ್ಕದ್ದು.

5) ಅಂಗನವಾಡಿ ಕಾರ್ಯಕರ್ತೆಯರು, ಸಹಾಯಕಿಯರು ಗೌರವ ಸೇವೆಗೆ ಸೇರಿದ್ದು ಮೀಸಲಾತಿ ತತ್ವಗಳು ಅನ್ವಯಿಸುವುದಿಲ್ಲವಾದ್ದರಿಂದ ಹೊಸದಾಗಿ ಕೇಂದ್ರ ಪ್ರಾರಂಭಿಸುವ ಯಾವುದೇ ಗ್ರಾಮದ ಜನಸಂಖ್ಯೆಯ ಶೇಕಡ 40 ಕ್ಕಿಂತ ಹೆಚ್ಚಾದ ಪರಿಶಿಷ್ಟ ಜಾತಿ/ಪಂಗಡದವರು ಒಳಗೊಂಡಿದ್ದಲ್ಲಿ ಆ ವರ್ಗಕ್ಕೆ ಸೇರಿದವರನ್ನು ಮಾತ್ರ ಅಂಗನವಾಡಿ ಸಹಾಯಕಿಯಾಗಿ ಆಯ್ಕೆ ಮಾಡಲಾಗುವುದೆಂದು ಅರ್ಜಿ ಆಹ್ವಾನಿಸುವ ಪ್ರಕಟಣೆಯಲ್ಲಿ ಕಡ್ಡಾಯವಾಗಿ ಸೂಚಿಸಬೇಕು ಹಾಗೂ ಅಂತಹವರನ್ನು ವಿದ್ಯಾರ್ಹತೆ ಮತ್ತು ಇತರ ಅರ್ಹತೆ ಮೇರೆಗೆ ಆಯ್ಕೆ ಮಾಡತಕ್ಕದ್ದು.

ಹಾಗೂ ಒಂದು ಗ್ರಾಮದಲ್ಲಿ ಈಗಾಗಲೇ ಅಂಗನವಾಡಿ ಕೇಂದ್ರವಿದ್ದು ಮನಃ ಬೇಡಿಕೆಗನುಸಾರವಾಗಿ ಹೊಸ ಕೇಂದ್ರವನ್ನು ಪ್ರಾರಂಭಿಸುತ್ತಿದ್ದಲ್ಲಿ, ಹೊಸ ಕೇಂದ್ರ ಪ್ರಾರಂಭಿಸುವ ಪ್ರದೇಶದ (ವ್ಯಾಪ್ತಿಯ) ಜನಸಂಖ್ಯೆಯಲ್ಲಿ ಶೇಕಡ 40 ಕ್ಕಿಂತ ಹೆಚ್ಚು ಜನಸಂಖ್ಯೆ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರಿದ್ದಲ್ಲಿ ಹಾಗೂ ಶೇಕಡ 25 ಕ್ಕಿಂತ ಹೆಚ್ಚು ಅಲ್ಪಸಂಖ್ಯಾತ ಜನಸಂಖ್ಯೆ ಒಳಗೊಂಡಿದ್ದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಸದರಿ ವರ್ಗದವರಿಗೆ ಸಹಾಯಕಿ ಹುದ್ದೆಯನ್ನು ನಿಗದಿಪಡಿಸಿ ಪ್ರಕಟಣೆ ಹೊರಡಿಸಿ ಅರ್ಜಿಗಳನ್ನು ಆಹ್ವಾನಿಸಿ ಆ ವರ್ಗದವರನ್ನೆ ಆಯ್ಕೆ ಮಾಡತಕ್ಕದ್ದು.

6) ಅಂಗನವಾಡಿ ಕೇಂದ್ರ ಪ್ರಾರಂಭಿಸುವ ಪ್ರದೇಶದ/ವಾರ್ಡ್/ಕಾಲೋನಿಯ ಒಟ್ಟು ಜನಸಂಖ್ಯೆಯು ಶೇಕಡ 40 ಕ್ಕಿಂತ ಹೆಚ್ಚು ಪರಿಶಿಷ್ಟ ಜಾತಿ, ಶೇಕಡ 40 ಕ್ಕಿಂತ ಹೆಚ್ಚು ಪರಿಶಿಷ್ಟ ವರ್ಗದವರು ಹಾಗೂ ಶೇಕಡ 25 ಕ್ಕಿಂತ ಹೆಚ್ಚು ಅಲ್ಪಸಂಖ್ಯಾತ ವರ್ಗದವರನ್ನು ಒಳಗೊಂಡಿದ್ದ ಸಂದರ್ಭದಲ್ಲಿ ಈ ವರ್ಗದವರ ಪೈಕಿ ಅತಿ ಹೆಚ್ಚು ಜನಸಂಖ್ಯೆಯಿರುವ ವರ್ಗದವರಿಗೆ ಸಹಾಯಕಿಯ ಹುದ್ದೆಯನ್ನು ನಿಗದಿಪಡಿಸಿ ಪ್ರಕಟಣೆ ಹೊರಡಿಸಬೇಕು. ಪ್ರಕಟಣೆಯಲ್ಲಿ ಸ್ಪಷ್ಟವಾಗಿ ಯಾವ ವರ್ಗದವರಿಗೆ ಹುದ್ದೆಯನ್ನು ನಿಗದಿಪಡಿಸಲಾಗಿದೆಯೆಂದು ಸೂಚಿಸಬೇಕು. ನಿಗದಿಪಡಿಸಿದ ವರ್ಗದವರನ್ನೇ ಆಯ್ಕೆ ಮಾಡಬೇಕು.

7) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಅಲ್ಪಸಂಖ್ಯಾತರಿಗೆ ಸಹಾಯಕಿ ಹುದ್ದೆ ನಿಗದಿಪಡಿಸಿದ ಅಂಗನವಾಡಿ ಕೇಂದ್ರಗಳಲ್ಲಿ ನಿಗದಿತ ವರ್ಗದವರಿಂದ ಅರ್ಜಿಗಳು ಬಾರದೇ ಹೋದ ಪಕ್ಷದಲ್ಲಿ ಮರು ಪ್ರಕಟಣೆಯನ್ನು ಹೊರಡಿಸಿ ಮನಃ ಅರ್ಜಿಗಳನ್ನು ಆಹ್ವಾನಿಸಬೇಕು. ಆಗಲೂ ನಿಗದಿತ ವರ್ಗದವರಿಂದ ಅರ್ಜಿಗಳು ಬಾರದೇ ಹೋದ ಪಕ್ಷದಲ್ಲಿ ಮನಃ ಪ್ರಕಟಣೆ ಹೊರಡಿಸಿ ಇತರೆ ವರ್ಗದವರಿಂದ ಅರ್ಜಿ ಆಹ್ವಾನಿಸಬಹುದಾಗಿದೆ.

8) ಒಂದು ಗ್ರಾಮದಲ್ಲಿ ಒಂದಕ್ಕಿಂತ ಹೆಚ್ಚು ಅಂಗನವಾಡಿ ಕೇಂದ್ರ ಪ್ರಾರಂಭಿಸುತ್ತಿದ್ದು, ಆ ಕೇಂದ್ರಗಳಿಗೆ ಸಂಬಂಧಪಟ್ಟ ವಾರ್ಡ್ / ಕಾಲೋನಿ/ ಜನಸಂಖ್ಯಾ ವ್ಯಾಪ್ತಿಯ ಪ್ರದೇಶದವರಿಂದ ಮಾತ್ರ ಅರ್ಜಿಗಳನ್ನು ಆಹ್ವಾನಿಸಬೇಕು. ಒಂದು ಪಕ್ಷ ಸಂಬಂಧ ಪಟ್ಟ ವಾರ್ಡ್ / ಕಾಲೋನಿ/ ಪ್ರದೇಶದವರಿಂದ ಅರ್ಜಿಗಳು ಸ್ವೀಕೃತವಾಗದೇ ಹೋದಲ್ಲಿ ಅದೇ ಗ್ರಾಮದ ಬೇರೆ ಕಾಲೋನಿ / ವಾರ್ಡ್‌ನ ಅಭ್ಯರ್ಥಿಗಳ ಅರ್ಹ ಅರ್ಜಿಯನ್ನು ಪರಿಗಣಿಸಬಹುದಾಗಿದೆ. ಯಾವುದೇ ಗ್ರಾಮದಲ್ಲಿ ಸ್ಥಳೀಯ ಅಭ್ಯರ್ಥಿಯಿಂದ ಅರ್ಜಿ ಬಾರದೇ ಇದ್ದಾಗ ಮಾತ್ರ ಅದನ್ನು ಪಂಚನಾಮೆ ಮೂಲಕ ಖಚಿತಪಡಿಸಿಕೊಂಡು ನಂತರ ಹತ್ತಿರದ ಗ್ರಾಮದಿಂದ ಆಯ್ಕೆಮಾಡುವುದು.

9) ಅಂಗನವಾಡಿ ಸಹಾಯಕಿಯ ಹುದ್ದೆಯಲ್ಲಿ ಅಂಗನವಾಡಿ ಮಕ್ಕಳಿಗೆ ಪೂರಕ ಪೌಷ್ಠಿಕ ಆಹಾರವನ್ನು ಬೇಯಿಸಿ / ಸಿದ್ಧಪಡಿಸಿ ಉಣಬಡಿಸಬೇಕಾಗುತ್ತದೆ ಮತ್ತು ಕೇಂದ್ರವನ್ನು ಶುಚಿಗೊಳಿಸಬೇಕಾಗುತ್ತದೆ. ಹಾಗೂ ಮಕ್ಕಳನ್ನು ಅವರ ಮನೆಗಳಿಂದ ಕೇಂದ್ರಕ್ಕೆ ಕರೆತರುವ ಕೆಲಸ ನಿರ್ವಹಿಸಬೇಕು. ಕಾರ್ಯಕರ್ತೆಯ ಗೈರುಹಾಜರಿಯಲ್ಲಿ ತಾತ್ಕಾಲಿಕವಾಗಿ ಕೇಂದ್ರವನ್ನು ನಿರ್ವಹಿಸಬೇಕು. ಆದಕಾರಣ ಸಹಾಯಕಿಯ ಹುದ್ದೆಗೆ ಅಂಗವಿಕಲ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅವಕಾಶವಿಲ್ಲ.

10) ಅಂಗನವಾಡಿ ಸಹಾಯಕಿಯ ಹುದ್ದೆಗೆ ವಿಧವೆಯರು ಅರ್ಜಿ ಸಲ್ಲಿಸಿದಾಗ ಇತರ ಎಲ್ಲ ಸ್ವೀಕೃತ ಅರ್ಜಿಗಳನ್ನು ಪರಿಗಣಿಸದೆ ನೇರವಾಗಿ ವಿಧವೆಯರನ್ನೆ ಆಯ್ಕೆ ಮಾಡತಕ್ಕದ್ದು, ಆದರೆ ವಿಧವೆ ಅಭ್ಯರ್ಥಿಯು 4ನೇ ತರಗತಿ ವಿದ್ಯಾರ್ಹತೆ ಹೊಂದಿರುವುದು ಕಡ್ಡಾಯವಾಗಿರುತ್ತದೆ. ಹಾಗೂ ಸ್ಥಳೀಯರು ಮತ್ತು ವಯೋಮಿತಿಯೊಳಗಿರಬೇಕಾದುದು ಕಡ್ಡಾಯ. ಒಂದೇ ಹುದ್ದೆಗೆ ಇಬ್ಬರು ವಿಧವೆಯರು ಅರ್ಜಿ ಸಲ್ಲಿಸಿದ್ದಲ್ಲಿ ಗರಿಷ್ಠ ಅಂಕ ಪಡೆದವರನ್ನು ಆಯ್ಕೆಮಾಡಬಹುದಾಗಿದೆ. ವಿಧವೆಯರು ಪ್ರಸ್ತುತ ತಾವು ಎಲ್ಲಿ ವಾಸವಾಗಿರುವುದಾಗಿ ವಾಸಸ್ಥಳವನ್ನು ಸಲ್ಲಿಸಿರುತ್ತಾರೋ ಆ ಸ್ಥಳವನ್ನೆ ಅವರ ವಾಸಸ್ಥಳವೆಂದು ಪರಿಗಣಿಸತಕ್ಕದ್ದು. ಉದಾಹರಣೆಗೆ ವಿಧವೆ ಅಭ್ಯರ್ಥಿಯ ಗಂಡನ ಮನೆಯು ಬೇರೆ ಗ್ರಾಮವಾಗಿದ್ದು ಪ್ರಸ್ತುತ ಅಂಗನವಾಡಿ ಹುದ್ದೆ ತೆರೆಯುತ್ತಿರುವ ಗ್ರಾಮವು ಆಕೆ ತಾಯಿಯ ಮನೆಯಾಗಿದ್ದು ಆಕೆಯು ತನ್ನ ವಾಸ ಸ್ಥಳವನ್ನು ಬದಲಾಯಿಸಿಕೊಂಡಿದ್ದು ತಾಯಿಯ ಮನೆಯಲ್ಲಿಯೇ ವಾಸವಾಗಿರುವುದಾಗಿ ವಾಸಸ್ಥಳ ಪ್ರಮಾಣ ಪತ್ರ ನೀಡಿದ್ದಲ್ಲಿ ಆ ಸ್ಥಳವನ್ನೇ ಆಕೆಯ ವಾಸಸ್ಥಳವೆಂದು ಪರಿಗಣಿಸತಕ್ಕದ್ದು.

11) ಪರಿಶಿಷ್ಟ ಜಾತಿ / ಪಂಗಡ / ಅಲ್ಪಸಂಖ್ಯಾತ ವರ್ಗದವರಿಗೆ ಸಹಾಯಕಿಯ ಹುದ್ದೆಯನ್ನು ಮೀಸಲಿಟ್ಟ ಕೇಂದ್ರಗಳಲ್ಲಿ ಆ ವರ್ಗಕ್ಕೆ ಸೇರಿದ ವಿಧವೆಯರು ಅರ್ಜಿ ಸಲ್ಲಿಸಿದಲ್ಲಿ ಕಂಡಿಕೆ 10 ರಲ್ಲಿ ತಿಳಿಸಿದಂತೆ ವಿಧವೆಯರನ್ನೇ ಆಯ್ಕೆ ಮಾಡಬೇಕು. ಬೇರೆ ವರ್ಗದ ವಿಧವೆಯರು ಅರ್ಜಿ ಸಲ್ಲಿಸಿದ ಪಕ್ಷದಲ್ಲಿ ಪರಿಗಣಿಸುವ ಅವಶ್ಯಕತೆಯಿರುವುದಿಲ್ಲ.

12) ಮೇಲೆ ತಿಳಿಸಿದ ಪ್ರಕಾರ ಪ್ರಕಟಣೆಗನುಸಾರವಾಗಿ ಸ್ವೀಕೃತವಾದ ಅರ್ಜಿಗಳ ರಿಜಿಸ್ಟರ್ ನಿರ್ವಹಿಸಬೇಕು. ಹಾಗೂ ಸ್ವೀಕೃತವಾದ ಅರ್ಜಿಗಳನ್ನು ಕ್ರೋಢೀಕರಿಸಿ ಪಟ್ಟಿಯನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸಿದ್ಧಪಡಿಸಬೇಕು. ಹಾಗೂ ತಿರಸ್ಕೃತ ಅರ್ಜಿ ಪಟ್ಟಿಯನ್ನು ಸಕಾರಣದೊಂದಿಗೆ ಸಿದ್ಧಪಡಿಸಿ ಆಯ್ಕೆ ಸಮಿತಿಯ ಮುಂದೆ ಮಂಡಿಸಬೇಕು. ಅಭ್ಯರ್ಥಿಗಳ ಪಟ್ಟಿಯನ್ನು ಅರ್ಹತೆ ಮತ್ತು ಮೆರಿಟ್‌ಗನುಸಾರವಾಗಿ ಪರಿಶೀಲಿಸಿ ಮೇಲೆ ತಿಳಿಸಿದ ನಿಯಮಗಳಿಗನುಸಾರ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಆಯ್ಕೆ ಮಾಡತಕ್ಕದ್ದು.

13) ಆಯ್ಕೆ ಸಮಿತಿಯ ಎಲ್ಲಾ ಸದಸ್ಯರು ಹಾಜರಾಗಲು ಸಾಧ್ಯವಾಗದಂತಹ ಅನಿವಾರ್ಯ ಕಾರಣಗಳಿದ್ದಲ್ಲಿ ಕನಿಷ್ಠ 2/3 ರಷ್ಟು ಸದಸ್ಯರು ಕಡ್ಡಾಯವಾಗಿ ಹಾಜರಿರಬೇಕು.

14) ಆಯ್ಕೆ ಸಮಿತಿಯ ನಡವಳಿಯನ್ನು ಸವಿವರವಾಗಿ ನಮೂದಿಸಬೇಕು. ಹಾಗೂ ಆಯ್ಕೆಯಾದ ಅಭ್ಯರ್ಥಿಗಳ ಹೆಸರುಗಳನ್ನು ನಡವಳಿಯಲ್ಲಿ ದಾಖಲಿಸಿ ಅಭ್ಯರ್ಥಿಗಳ ಆಯ್ಕೆ ಬಗ್ಗೆ ಇರುವ ಅರ್ಹತೆಗಳನ್ನು ನಮೂದಿಸಬೇಕು. ಹಾಜರಿರುವ ಆಯ್ಕೆ ಸಮಿತಿಯ ಎಲ್ಲಾ ಸದಸ್ಯರ ಸಹಿಯನ್ನು ಪಡೆಯಬೇಕು. ಸದಸ್ಯರ ಗೈರುಹಾಜರಿ ಬಗ್ಗೆ ಕಾರಣ ನಮೂದಿಸಬೇಕು.

15) ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಆಯ್ಕೆ ಸಮಿತಿಯ ಸಭೆ ನಡೆದ ದಿನಾಂಕದಂದು ಸಿದ್ಧಪಡಿಸಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸೂಚನಾ ಫಲಕದಲ್ಲಿ ಪ್ರಕಟಿಸಿ ಆಕ್ಷೇಪಣೆಗಳನ್ನು ಆಹ್ವಾನಿಸಿ ಒಂದು ವಾರ ಕಾಲಾವಕಾಶ ನೀಡಬೇಕು. ಆಕ್ಷೇಪಣೆಗಳು ಸ್ವೀಕೃತವಾದಲ್ಲಿ ಅವುಗಳನ್ನು ಕ್ರೋಢೀಕರಿಸಿ ಮನಃ ಆಯ್ಕೆ ಸಮಿತಿಯ ಸಭೆ ಕರೆದು ಚರ್ಚಿಸಿ ತದನಂತರ ಅಂತಿಮ ಪಟ್ಟಿಯನ್ನು ಸಿದ್ಧಗೊಳಿಸಿ ಸೂಚನಾ ಫಲಕದಲ್ಲಿ ಪ್ರಕಟಿಸಬೇಕು. ಹಾಗೂ ಆಯ್ಕೆ ಸಮಿತಿಯ ನಡವಳಿ ಆಧಾರದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಶಿಶು ಅಭಿವೃದ್ಧಿ

ಯೋಜನಾಧಿಕಾರಿಗಳು ಆಯ್ಕೆ ಆದೇಶವನ್ನು ಹೊರಡಿಸುವುದು ಮತ್ತು ಸದರಿ ಆದೇಶಕ್ಕೆ ಉಪ ನಿರ್ದೇಶಕರಿಂದ ಅನುಸಮರ್ಥನೆ ಪಡೆಯುವುದು.

16) ಸದರಿ ಹುದ್ದೆಯು ಸಂಪೂರ್ಣವಾಗಿ ಗೌರವಸೇವೆಯಾಗಿದ್ದು ಖಾಯಂ ಹುದ್ದೆಯಲ್ಲವೆಂಬ ಬಗ್ಗೆ ನೇಮಕಾತಿ ಆದೇಶದಲ್ಲಿ ತಿಳಿಸಬೇಕು. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ನಡವಳಿ ಮತ್ತು ಆದೇಶದ ಪ್ರತಿಯನ್ನು ಸಲ್ಲಿಸತಕ್ಕದ್ದು.

17) ಅರ್ಜಿಗಳ ಆಯ್ಕೆಯಲ್ಲಿ ಯಾವುದೇ ಲೋಪದೋಷಗಳು / ಅಕ್ರಮಗಳು ಕಂಡುಬಂದಲ್ಲಿ, ಸಂಬಂಧಪಟ್ಟ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು / ಉಪ ನಿರ್ದೇಶಕರು ನೇರವಾಗಿ ಜವಾಬ್ದಾರರಾಗಿರುತ್ತಾರೆ.

**ಎಸ್. ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 2518

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ಸುತ್ತೋಲೆ

ಸಂಖ್ಯೆ: ಮಮಇ: 14:ಪಿಹೆಚ್‌ಪಿ: 2010, ಬೆಂಗಳೂರು, ದಿನಾಂಕ: 20.09.2010

ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಸಂಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995 ಜಾರಿಯಲ್ಲಿದೆ. ಅಂಗವಿಕಲರ ಅಧಿನಿಯಮ ಅನುಷ್ಠಾನದ ಪರಿಶೀಲನೆ ಕುರಿತು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಾಜ್ಯ ಸರ್ಕಾರವು ರಚಿಸಿರುವ ನೋಡಲ್ ಸಮಿತಿ ಸಭೆಯಲ್ಲಿ ಎಲ್ಲಾ ಇಲಾಖೆಗಳೊಂದಿಗೆ ಸಮನ್ವಯಗೊಳಿಸಿ ಅಂಗವಿಕಲರಿಗೆ ಸಂಬಂಧಿಸಿದಂತೆ ಕಛೇರಿ ಹಾಗೂ ಸಾರ್ವಜನಿಕ ಸ್ಥಳಗಳಲ್ಲಿ ತಡೆರಹಿತ ವಾತಾವರಣ ಮತ್ತು ಮೀಸಲಾತಿಯನುಸಾರ ವಿವಿಧ ಸೌಲಭ್ಯ ಒದಗಿಸಬೇಕಾಗಿದೆ.

ಅಂಗವಿಕಲರ ಅಧಿನಿಯಮ 1995 ರ ಪರಿಚ್ಛೇದ 46 ರಂತೆ ಪ್ರತಿ ಸಾರ್ವಜನಿಕ ಕಟ್ಟಡ ಹಾಗೂ ಸ್ಥಳಗಳಲ್ಲಿ ಅಂಗವಿಕಲರು ಸುಲಭವಾಗಿ ಓಡಾಡಲು ಅನುವಾಗುವಂತೆ ಇಳಿಜಾರು ದಾರಿ, ಅಂಗವಿಕಲ ಸ್ನೇಹಿ ಶೌಚಾಲಯ, ಸೂಚನಾ ಫಲಕಗಳು, ಟೀಕ್ ಟೈಲ್ ಫ್ಲೋರಿಂಗ್, ಲಿಫ್ಟ್‌ಗಳಲ್ಲಿ ಬ್ರೈಲ್ ಸಂಕೇತ ಮತ್ತು ಶಬ್ದ ಸಂಕೇತಗಳನ್ನು ಕಲ್ಪಿಸಲು ಅವಶ್ಯವಿದೆ. ಅದರಂತೆ, ಅಂಗವಿಕಲರಿಗೆ ರಾಜ್ಯಾದ್ಯಂತ ಸರ್ಕಾರಿ ಕಛೇರಿ ಹಾಗೂ ಸಾರ್ವಜನಿಕ ಸ್ಥಳಗಳಲ್ಲಿ ತಡೆರಹಿತ ವಾತಾವರಣ ಕಲ್ಪಿಸಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳುವ ಮೇಲ್ವಿಚಾರಣೆಗೆ ಅಂಗವಿಕಲರ ಅಧಿನಿಯಮ ಕಛೇರಿಯು ಕಾರ್ಯಪ್ರವೃತ್ತವಾಗಿದೆ.

ಅಂಗವಿಕಲರಿಗೆ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಸಂಪೂರ್ಣ ಭಾಗವಹಿಸುವಿಕೆ) ಕಾಯ್ದೆ 1995 ರಲ್ಲಿ ಸಾರ್ವಜನಿಕ ಸ್ಥಳಗಳಲ್ಲಿ ಅಂಗವಿಕಲರಿಗೆ ಅನುಕೂಲ ವಾತಾವರಣ ಕಲ್ಪಿಸಬೇಕೆಂಬ ನಿಯಮ ಜಾರಿಗೆ ಆದೇಶಿಸುವಂತೆ ಕೋರಿ ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ಸಲ್ಲಿಸಿರುವ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಸಂಖ್ಯೆ: 37434/09 ನ್ನು ವಿಭಾಗೀಯ ಪೀಠವು ಕೂಲಂಕುಷವಾಗಿ ಪರಿಶೀಲಿಸಿ ದಿನಾಂಕ: 09.04.2010 ರಂದು ನೀಡಿದ ತೀರ್ಪು ಈ ಕೆಳಗಿನಂತಿದೆ:

" 1) P.W.D. shall make immediate and necessary arrangements for barrier free access to disabled persons at Vishweshwaraiah Tower, Commissioner for Persons with disabilities and Multi-Stroried Building.

2) The respondents also shall see that necessary circular is issued to the concerned public offices other than Government offices to provide proper facility for the access of the disabled persons."

ದಿನಾಂಕ: 09.04.2010ರ ತೀರ್ಪಿನಲ್ಲಿರುವ ಅಂಶಗಳು ರಾಜ್ಯ ಸರ್ಕಾರದ ಎಲ್ಲಾ ಇಲಾಖೆಗಳಿಗೂ ಕಡ್ಡಾಯವಾಗಿ ಅನ್ವಯಿಸುವುದರಿಂದ ಅದರಂತೆ, ಅಂಗವಿಕಲರಿಗೆ ಸಾರ್ವಜನಿಕ ಕಛೇರಿಗಳಲ್ಲಿ ತಡೆರಹಿತ ವಾತಾವರಣ ನಿರ್ಮಿಸುವ ಜವಾಬ್ದಾರಿಯನ್ನು ಲೋಕೋಪಯೋಗಿ ಇಲಾಖೆಯು ವಹಿಸತಕ್ಕದ್ದು ಹಾಗೂ ಸಂಬಂಧಪಟ್ಟ ಇಲಾಖೆಯಾದ ಅಂಗವಿಕಲ ಅಧಿನಿಯಮ ಕಛೇರಿಯು ಅನುಸರಣಾ ಪ್ರಾಧಿಕಾರವಾಗಿರತಕ್ಕದ್ದು.

ಮಾನ್ಯ ಸರ್ವೋಚ್ಚ ನ್ಯಾಯಾಲಯ ಹಾಗೂ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ, ಸಾರ್ವಜನಿಕ ಹಿತಾಸಕ್ತಿ ಅರ್ಜಿಗಳ ಮೇಲೆ ಅಂಗವಿಕಲರ ಅಧಿನಿಯಮ ಅನುಷ್ಠಾನವನ್ನು ಪರಿಶೀಲನೆ ಮಾಡುತ್ತಿರುವುದರಿಂದ ರಾಜ್ಯಾದ್ಯಂತ ತಮ್ಮ ಇಲಾಖಾ ವ್ಯಾಪ್ತಿಗೊಳಪಡುವ ಅಧೀನ ಕಛೇರಿಗಳಲ್ಲಿ ಅಂಗವಿಕಲರ ಅಧಿನಿಯಮ ಅನುಷ್ಠಾನಗೊಂಡ ಕಾರ್ಯಕ್ರಮಗಳ ಬಗ್ಗೆ ಆಗ್ಗಿಂದಾಗ್ಗೆ ಪರಿಶೀಲಿಸಿ ನೋಡತಕ್ಕದ್ದು.

ಲೋಕೋಪಯೋಗಿ ಇಲಾಖೆಯು ಸರ್ಕಾರಿ ಕಛೇರಿಗಳ ಕಟ್ಟಡ ನಿರ್ಮಿಸುವ ನಕ್ಷೆಯಲ್ಲಿ ಅಂಗವಿಕಲರಿಗಾಗಿ ಇಳಿಜಾರು ವ್ಯವಸ್ಥೆ ಹಾಗೂ ವಾಹನ ನಿಲುಗಡೆಗೆ ಸೂಕ್ತ ಸ್ಥಳ ವ್ಯವಸ್ಥೆಯನ್ನು ಅಳವಡಿಸಿ ಕಟ್ಟಡ ಕಾಮಗಾರಿಯನ್ನು ನಿರ್ಮಿಸುವಂತೆ ಹಾಗೂ ಈಗಾಗಲೇ ನಿರ್ಮಿಸಿರುವ ಕಟ್ಟಡಗಳಲ್ಲಿ ಅಂಗವಿಕಲರ ಅನುಕೂಲಕ್ಕಾಗಿ ನಿರ್ಮಿಸಿರುವ ಇಳಿಜಾರು ವ್ಯವಸ್ಥೆಯಲ್ಲಿ ತೊಂದರೆ ಉದ್ಭವಿಸುವುದನ್ನು ಸಹ ತಕ್ಷಣ ಸರಿಪಡಿಸಲು ಸಂಬಂಧಿಸಿದ ತಮ್ಮ ಅಧೀನ ಕಛೇರಿಗಳ ಮುಖ್ಯಸ್ಥರಿಗೆ ನಿರ್ದೇಶನ ನೀಡುವಂತೆ ಸೂಚಿಸಲಾಗಿದೆ.

**ಸಿ. ಎನ್. ಸೀತಾರಾಮ್**
ಸರ್ಕಾರದ ಕಾರ್ಯದರ್ಶಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 2519

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು.

**ಓದಲಾಗಿದೆ :** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಜಿ–44/ಸಿಆರ್ 10/2010 ಕೊಪ್ಪಳ, ದಿನಾಂಕ: 03–09–2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 03–09–2010ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಶ್ರೀ ಶಾಮಣ್ಣ ಬಿನ್ ದುರಗಪ್ಪ ಮಾದರ್, ಕೃಷಿಕ, , ಗುಡ್ಡದ ಹನುಮಸಾಗರ, ಕುಷ್ಟಗಿ ತಾಲ್ಲೂಕು, ಇವರು ತಮ್ಮ ಗ್ರಾಮದ ಸರ್ವೆ ನಂ. 3/1 ರಲ್ಲಿ 4 ಎಕರೆ 31 ಗುಂಟೆ ಮತ್ತು ತನ್ನ ಅಣ್ಣನ ಮಗ ದುರಗಪ್ಪ ಬಿನ್ ಹನುಮಂತಪ್ಪ ಇದೇ ಸರ್ವೆ ನಂಬರಿನ 4 ಎಕರೆ 31 ಗುಂಟೆ ಜಮೀನಿನ ಸಾಗುವಳಿ ಚೇಟಿ ಪಡೆದುಕೊಂಡಿದ್ದು, ಸದರಿ ಜಮೀನುಗಳ ಪೂರ್ಣ ಅಧಿಕಾರ ಹೊಂದುವ ಸಲುವಾಗಿ ಪಹಣಿಗಳನ್ನು ಪಡೆಯಲು ಸೂಕ್ತ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಿ, ವಿಚಾರಿಸಿದಾಗ, ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಇವರು ರೂ. 10,000/– ರೂಪಾಯಿಗಳನ್ನು ಲಂಚ ಕೊಡುವಂತೆ ಒತ್ತಾಯಿಸಿದ್ದರಿಂದ. ಈ ಕುರಿತು ಸೂಕ್ತ ಕ್ರಮ ಕೈಗೊಳ್ಳುವಂತೆ ದೂರು ನೀಡಿದ್ದರು.

ಈ ಹಿನ್ನೆಲೆಯಲ್ಲಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಕೊಪ್ಪಳ, ಇವರು ಮೇಲ್ಕಂಡ ಆರೋಪಿತ ಅಧಿಕಾರಿಯ ವಿರುದ್ಧ ಲಂಚ ನಿರೋಧಕ ಖಾಯಿದೆ 1998 ರ ಕಲಂ 7, 13, (1) ಡಿ ಜೊತೆಗೆ 13 (2) ರ ಪ್ರಕಾರ ಕೊಪ್ಪಳ ಲೋಕಾಯುಕ್ತ ಠಾಣೆ ಮೊಕದ್ದಮೆ ನಂ. 10/2010 ರಲ್ಲಿ ಪ್ರಕರಣವನ್ನು ದಾಖಲಿಸಿ, ತನಿಖೆಯನ್ನು ಕೈಗೊಂಡು ನಂತರ ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ದಿನಾಂಕ: 19–08–2010 ರಂದು ಬೀಸಿದ ಬಲೆಯು ಯಶಸ್ವಿಯಾಗಿದ್ದು, ಆರೋಪಿತ ಅಧಿಕಾರಿಯಾದ ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಇವರು ತಮ್ಮ ಕಛೇರಿಯಲ್ಲಿ ಸಾಕ್ಷಿದಾರರ ಸಮಕ್ಷಮ ದೂರುದಾರರಿಂದ ಲಂಚದ ಹಣ ರೂ. 10,000/–ವನ್ನು ಕೇಳಿ, ದೂರುದಾರರು ಕೊಡಲು ಹೋದಾಗ ಅಲ್ಲಿಯೇ ಇದ್ದ, ಖಾಸಗಿ ವ್ಯಕ್ತಿ ಶ್ರೀ ವೀರೇಶ್ ಬಿನ್ ಯಮನೂರಪ್ಪ, ಮಂಗಳೂರು, ಇವರಿಗೆ ಕೊಡುವಂತೆ ತಿಳಿಸಿದ್ದು, ಅದರಂತೆ ಲಂಚದ ಹಣವನ್ನು ದೂರುದಾರರಿಂದ ಸದರಿ ಖಾಸಗಿ ವ್ಯಕ್ತಿಯು ಲಂಚದ ಹಣವನ್ನು ಪಡೆಯುವಾಗ ಸಿಕ್ಕಿಬಿದ್ದಿರುತ್ತಾರೆ. ಈ ರೀತಿ ನಡೆದ ಘಟನೆ ಬಗ್ಗೆ ದೂರುದಾರರು ಮತ್ತು ಸಾಕ್ಷಿದಾರರು ತಮ್ಮ ಹೇಳಿಕೆಯಲ್ಲಿ ದೃಢಪಡಿಸಿರುವುದರಿಂದ ಸದರಿ ಇಬ್ಬರು ಆರೋಪಿತರುಗಳನ್ನು ಘನ ನ್ಯಾಯಾಲಯದ ನ್ಯಾಯಾಧೀಶರ ಮುಂದೆ ಹಾಜರು ಪಡಿಸಲಾಗಿದೆ ಎಂದು ತಿಳಿಸುತ್ತಾ, ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ, ಮತ್ತು ಶ್ರೀ ವೀರೇಶ್, ಖಾಸಗಿ ವ್ಯಕ್ತಿ ಇವರುಗಳ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲು ನೋಟಕ್ಕೆ ಸಾಬೀತಾಗಿರುತ್ತದೆ. ಆದ್ದರಿಂದ ಆರೋಪಿ ಸರ್ಕಾರಿ ಅಧಿಕಾರಿಯಾದ ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ, ಕೊಪ್ಪಳ ಜಿಲ್ಲೆ, ಇವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಈ ಕೂಡಲೇ ಅಮಾನತ್ತಿನಲ್ಲಿಡಬೇಕೆಂದು ಹಾಗೂ ಕೂಡಲೇ ಅವರ ಲೀನ್ (ಸ್ಥಾನವನ್ನು) ಬೇರೆ ಕಡೆಗೆ ವರ್ಗಾಯಿಸಲು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ವರದಿ ಹಾಗೂ ಅದರೊಂದಿಗೆ ಕಳುಹಿಸಲಾದ ದಾಖಲೆಗಳನ್ನು ಪರಿಶೀಲಿಸಲಾಗಿ, ಲಂಚಕ್ಕೆ ಒತ್ತಾಯಿಸಿದ ಬಗ್ಗೆ ಸಂಭಾಷಣೆಯನ್ನು Voice Record ಮಾಡಲಾಗಿದೆ ಎಂದು ತಿಳಿಸಿರುತ್ತಾರೆ. ಹಣ ಪಡೆದುಕೊಂಡ ಖಾಸಗಿ ವ್ಯಕ್ತಿಯು ತಹಶೀಲ್ದಾರರು ಹಣ ಪಡೆದುಕೊಳ್ಳಲು ತಿಳಿಸಿದ್ದರೆಂದು ಲಿಖಿತ ಹೇಳಿಕೆ ನೀಡಿರುತ್ತಾರೆ. ಆದ್ದರಿಂದ ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ, ಇವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವಂತೆ ಕಂಡುಬರುತ್ತದೆ. ಆದುದರಿಂದ, ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ, ಇವರನ್ನು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 10(1)(ಎ) ರನ್ವಯ ಸೇವೆಯಿಂದ ಅಮಾನತ್ತಿನಲ್ಲಿಡಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 58 ಎಡಿಇ 2010, ಬೆಂಗಳೂರು, ದಿನಾಂಕ : 23–09–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 10(1)(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಅಧಿಕಾರಿಯ ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ದೇಸಾಯಿ**

ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ

(ಸೇವೆಗಳು ಮತ್ತು ವಿಪತ್ತು ನಿರ್ವಹಣೆ)

ಪಿ.ಆರ್. 2520

## ಕಂದಾಯ ಸಚಿವಾಲಯ

**ವಿಷಯ :** ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬ್ಬಂದಿ 1 ಸಿ ಆರ್ 19/10–11/ ದಿನಾಂಕ: 28.5.2010

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದಲ್ಲಿನ 34214 ಅಧಿಸೂಚಿತ ಸಂಸ್ಥೆಗಳು, ಹೊರರಾಜ್ಯಗಳಲ್ಲಿ ವಾರಣಾಸಿ, ಶ್ರೀಶೈಲಂ, ಮಂತ್ರಾಲಯ ಮತ್ತು ತಿರುಮಲದಲ್ಲಿನ ಕರ್ನಾಟಕ ರಾಜ್ಯ ಛತ್ರಗಳು ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿದ್ದು ಇವುಗಳ ನಿರ್ವಹಣೆಗೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಮೇಲುಸ್ತುವಾರಿಯನ್ನು ಕೇಂದ್ರ ಕಛೇರಿಯಿಂದ ನಿರ್ವಹಿಸಬೇಕಾಗಿದ್ದು, ಕೇಂದ್ರ ಕಛೇರಿಯಲ್ಲಿ ಆಯುಕ್ತರು, ನಂತರದ ಸ್ಥಾನದಲ್ಲಿ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯಿದ್ದು, ಈ ಹುದ್ದೆಯು ಸಹಾಯಕ ಆಯುಕ್ತಕರು, ಕಿರಿಯ ಶ್ರೇಣಿ (ವೇತನಶ್ರೇಣಿ ರೂ. 14050–25050) ಯ ಹುದ್ದೆಯಾಗಿರುತ್ತದೆ.

ಧಾರ್ಮಿಕ ದತ್ತಿ ಇಲಾಖೆಯ 5 ದೇವಾಲಯಗಳ ಕಾರ್ಯನಿರ್ವಾಹಕ ಅಧಿಕಾರಿಗಳ ಹುದ್ದೆಯು ಸಮೂಹ–ಎ ಹಿರಿಯ ಶ್ರೇಣಿ ಹುದ್ದೆಗಳಾಗಿದ್ದು, ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯು ಕಿರಿಯ ಶ್ರೇಣಿಯ ಹುದ್ದೆಯಾಗಿರುತ್ತದೆ. ಸದರಿ ದೇವಾಲಯಗಳಿಂದ ಬರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಆಯುಕ್ತರಿಗೆ ಸಲ್ಲಿಸುವ ಜವಾಬ್ದಾರಿ ಕೇಂದ್ರ ಸ್ಥಾನಿಕ ಸಹಾಯಕರದ್ದಾಗಿರುವುದರಿಂದ, ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯು ಸದರಿ ದೇವಾಲಯಗಳಲ್ಲಿನ ಹುದ್ದೆಗಳಿಗಿಂತ ಮೇಲಿನ ದರ್ಜೆ ಹುದ್ದೆಯಾಗಿರಬೇಕು ಅಥವಾ ಸಮಾನಾಂತರ ಹುದ್ದೆಯಾಗಿರಬೇಕೆಂದು ಅಲ್ಲದೆ, ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರನ್ನು ಬೆಂಗಳೂರು ನಗರದಲ್ಲಿನ ಹಿಂದೂ ಧಾರ್ಮಿಕ ಸಂಸ್ಥೆಗಳ ಆಸ್ತಿ ಸಂರಕ್ಷಣೆಗಾಗಿ ಪಿ.ಪಿ.ಎ. ಕಾಯ್ದೆಯನ್ವಯ ಸಕ್ಷಮ ಪ್ರಾಧಿಕಾರಿಯೆಂದು ನೇಮಕ ಮಾಡಿದ್ದು, ಅದರಂತೆ, ಕೇಂದ್ರ ಸ್ಥಾನಿಕ ಸಹಾಯಕರು ಹಾಗೂ ಪಿ.ಪಿ.ಎ ಪ್ರಾಧಿಕಾರಿ ಇವರ ನ್ಯಾಯಾಲಯದಲ್ಲಿ ಒಟ್ಟು 220 ಪ್ರಕರಣಗಳು ದಾಖಲಾಗಿದ್ದು, ಇವುಗಳ ವಿಚಾರಣೆಯನ್ನು ಕೇಂದ್ರ ಸ್ಥಾನಿಕ ಸಹಾಯಕರು ನಡೆಸುತ್ತಿದ್ದಾರೆ. ಅಲ್ಲದೆ ಇತ್ತೀಚೆಗೆ ಕಂದಾಯ ಇಲಾಖೆಯ ಜಿಲ್ಲಾಧಿಕಾರಿಗಳ ಹುದ್ದೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಅನುಕೂಲವಾಗುವಂತೆ, ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯನ್ನು ಸಹಾಯಕ ಆಯುಕ್ತರ ಕಿರಿಯ ಶ್ರೇಣಿ ಹುದ್ದೆಯಿಂದ ಹಿರಿಯ ಶ್ರೇಣಿಗೆ ಉನ್ನತೀಕರಿಸಿ, ಕೇಂದ್ರ ಸ್ಥಾನಿಕ ಸಹಾಯಕರ ಪದನಾಮವನ್ನು ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು ಎಂದು ಮರುಪದನಾಮೀಕರಿಸಿ ಆದೇಶಿಸಿರುವಂತೆ ಧಾರ್ಮಿಕ ದತ್ತಿ ಇಲಾಖೆಯ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯನ್ನು ಸಹಾಯಕ ಆಯುಕ್ತರ ಕಿರಿಯ ಶ್ರೇಣಿ ಹುದ್ದೆಯಿಂದ, ಹಿರಿಯ ಶ್ರೇಣಿ ಹುದ್ದೆಗೆ ವೇತನಶ್ರೇಣಿ ರೂ. 14050–25050 ಯಿಂದ ವೇತನಶ್ರೇಣಿ ರೂ. 20025–28275ಕ್ಕೆ ಉನ್ನತೀಕರಿಸಿ, ಕೇಂದ್ರ ಸ್ಥಾನಿಕ ಸಹಾಯಕರ ಪದನಾಮವನ್ನು "ಉಪ ಆಯುಕ್ತರು" ಎಂದು ಮರುಪದನಾಮೀಕರಿಸಿ ಆದೇಶ ಹೊರಡಿಸಲು ಮೇಲೆ ಓದಲಾದ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 59 ಮುಸೇವಿ 2010, ಬೆಂಗಳೂರು, ದಿನಾಂಕ : 27.9.2010**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರ ವೇತನಶ್ರೇಣಿ ರೂ. 14,050–250250 (ಕಿರಿಯ ಶ್ರೇಣಿ)/ ಕೆ.ಎ.ಎಸ್.(ಕಿರಿಯ ಶ್ರೇಣಿ) ಹುದ್ದೆಯನ್ನು ವೇತನಶ್ರೇಣಿ ರೂ. 20,025–28275ರ ಹಿರಿಯ ಶ್ರೇಣಿ / ಕೆ.ಎ.ಎಸ್. (ಹಿರಿಯಶ್ರೇಣಿ) ಹುದ್ದೆಗೆ ತಾತ್ಕಾಲಿಕವಾಗಿ ಉನ್ನತೀಕರಿಸಿ ಆದೇಶಿಸಿದೆ.

ಸದರಿ ಉನ್ನತೀಕರಿಸಿದ ಹುದ್ದೆಗೆ ನೇಮಕಾತಿ ಮಾಡುವಾಗ ಅರ್ಹತಾ ಸೂತ್ರಗಳನ್ನು ಪಾಲಿಸಬೇಕೆಂಬ ಮತ್ತು ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ತಂತಾನೆ ಮುಂಬಡ್ತಿ ಪಡೆಯಬಾರದೆಂಬ ಷರತ್ತನ್ನು ವಿಧಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1177 ಸೇ–3/2010 ದಿನಾಂಕ 23.8.2010ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 2521

## ಕಂದಾಯ ಸಚಿವಾಲಯ

**ವಿಷಯ :** ಚಿತ್ರದುರ್ಗ ನಗರದ ಮೇಲುದುರ್ಗ ಕೋಟೆಯ ಬಳಸಿ ಇರುವ ಶ್ರೀ ಆಂಜನೇಯಸ್ವಾಮಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಎಡಿಎಂ 5 ಸಿಆರ್ 25/2010–11 ದಿನಾಂಕ: 06.08.2010

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ: 06.08.2010ರಲ್ಲಿ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ನಗರದ ಮೇಲುದುರ್ಗ ಕೋಟೆಯಲ್ಲಿ ಇರುವ ಶ್ರೀ ಆಂಜನೇಯಸ್ವಾಮಿ ದೇವಸ್ಥಾನವು ಪಾಳೆಗಾರರ ಆಳ್ವಿಕೆಯಲ್ಲಿ ನಿರ್ಮಾಣವಾಗಿದ್ದು. ಈ ದೇವಸ್ಥಾನವು ಮುಜರಾಯಿ ಇಲಾಖೆಗೆ ಒಳಪಟ್ಟ ಬಗ್ಗೆ ದಾಖಲೆಗಳ ಮೂಲಕ ವ್ಯಕ್ತವಾಗಿದ್ದು. ಈ ದೇವಸ್ಥಾನಕ್ಕೆ ಯಾವುದೇ ಚರ–ಸ್ಥಿರ ಆಸ್ತಿಯಾಗಲೀ, ಆದಾಯವಾಗಲೀ ಇರುವುದಿಲ್ಲ. ದೇವಸ್ಥಾನದ ಪೂಜೆಯನ್ನು ಅರ್ಚಕರು ವಂಶಪಾರಂಪರ್ಯವಾಗಿ ನಡೆಸಿಕೊಂಡು ಬರುತ್ತಿದ್ದು, ಸದರಿ ದೇವಸ್ಥಾನವನ್ನು ಇಲಾಖೆಯ ವಶಕ್ಕೆ ತೆಗೆದುಕೊಳ್ಳುವಂತೆ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆರವರು ಶಿಫಾರಸ್ಸು ಮಾಡಿರುತ್ತಾರೆ.

ಈ ದೇವಸ್ಥಾನಕ್ಕೆ ಸಮೀಪವಿರುವ ಶ್ರೀ ಗೋಪಾಲಸ್ವಾಮಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯ ಪುಟ ಸಂಖ್ಯೆ: 260 ಕ್ರಮ ಸಂಖ್ಯೆ: 96 ರಲ್ಲಿ ಪ್ರಕಟವಾಗಿದೆ. ಅದರ ಪಕ್ಕದಲ್ಲಿರುವ ಶ್ರೀ ಆಂಜನೇಯಸ್ವಾಮಿ ದೇವಸ್ಥಾನವನ್ನು ಚಿತ್ರದುರ್ಗ ಕೋಟೆಯಲ್ಲಿದ್ದ ಪಾಳೆಗಾರರ ವಂಶಸ್ಥರು ನಿರ್ಮಿಸಿರುವುದರಿಂದ ಐತಿಹಾಸಿಕ ಹಿನ್ನಲೆ ಹೊಂದಿದ್ದು, ದೇವಸ್ಥಾನವು ಯಾವುದೇ ಆದಾಯ ಹೊಂದಿಲ್ಲವಾದ್ದರಿಂದ ಸರ್ಕಾರದಿಂದ ನಗದು ಸಹಾಯಧನ ಮಂಜೂರು ಮಾಡಿ ನಂತರ ಸದರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 86 ಮುಆಬಿ 2010, ಬೆಂಗಳೂರು, ದಿನಾಂಕ : 24.09.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ನಗರದ ಮೇಲುದುರ್ಗ ಕೋಟೆಯ ಒಳಗಡೆ ಇರುವ ಶ್ರೀ ಆಂಜನೇಯಸ್ವಾಮಿ ದೇವಸ್ಥಾನವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997 ರ ಸೆಕ್ಷನ್ 23 (2) ರನ್ವಯ ಅಧಿಸೂಚಿತ ಪಟ್ಟಿಗೆ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2522 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕಿನ ಉಪ್ಪಾರಹಟ್ಟಿ ಗ್ರಾಮದ ಶ್ರೀ ವಿಠ್ಠಲ ರುಕ್ಮಿಣಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಎಡಿಎಂ 5 ಸಿಆರ್/2009–10 ದಿನಾಂಕ: 02.08.2010

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ: 02.08.2010ರಲ್ಲಿ ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕು, ಉಪ್ಪಾರಹಟ್ಟಿ ಗ್ರಾಮದ ಶ್ರೀ ವಿಠ್ಠಲ ರುಕ್ಮಿಣಿ ದೇವಾಲಯವು ಮುಂಬೈ ಸಾರ್ವಜನಿಕ ಜಿಮ್ಮೆಗಳ ನೋಂದಣಿ ಕಾಯ್ದೆ 1950ರ ಪ್ರಕಾರ ಎ–4505 (ಜಿ.ಜಿ.ಎಂ) ಕ್ರಮಾಂಕದಲ್ಲಿ ಬೆಳಗಾಂ ಸಹಾಯಕ ಧಾರ್ಮಿಕ ದತ್ತಿ ಆಯುಕ್ತರ ಕಛೇರಿಯಲ್ಲಿ ಸಾರ್ವಜನಿಕ ದೇವಾಲಯವೆಂದು ನೋಂದಣಿ ಆಗಿರುತ್ತದೆ. ಆದರೂ ಈ ದೇವಾಲಯವು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಪ್ರಕಾರ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟಣೆಯಾಗಿರುವುದಿಲ್ಲ. ಸದರಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವಂತೆ ಜಿಲ್ಲಾಧಿಕಾರಿಗಳು ಬೆಳಗಾಂ ಜಿಲ್ಲೆರವರು ಕೋರಿದ್ದು, ಈ ನಿಟ್ಟಿನಲ್ಲಿ ಸದರಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶಿಸುವಂತೆ ಆಯುಕ್ತರು. ಧಾರ್ಮಿಕ ದತ್ತಿ ಇಲಾಖೆರವರು ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 81 ಮುಆಬಿ 2010, ಬೆಂಗಳೂರು, ದಿನಾಂಕ : 20.09.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ, ಗೋಕಾಕ್ ತಾಲ್ಲೂಕು ಉಪ್ಪಾರಹಟ್ಟಿ ಗ್ರಾಮದ ಶ್ರೀ ವಿಠ್ಠಲ ರುಕ್ಮಿಣಿ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಸೆಕ್ಷನ್ 23 (2)ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಪಿ.ಆರ್. 2523 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕಿನ ವಾಡಿಯ ಶ್ರೀ ರಾಜಾಕಂದಸ್ವಾಮಿ ಧರ್ಮಶಾಲೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಎಡಿಎಂ 5 ಸಿಆರ್ 7/2009–10 ದಿನಾಂಕ: 13.07.2010

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ: 13.07.2010ರಲ್ಲಿ ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕು, ವಾಡಿ ಜಂಕ್ಷನ್‌ನಲ್ಲಿರುವ ರಾಜಾಕಂದಸ್ವಾಮಿ ಧರ್ಮ ಶಾಲೆಯನ್ನು ಹಿಂದಿನ ಹೈದರಾಬಾದ್ ಎಂಡೋಮೆಂಟ್ಸ್ ರೆಗ್ಯೂಲೇಷನ್ಸ್ ಪ್ರಕಾರ ಇಲಾಖೆಯ ನಿಯಂತ್ರಣದಲ್ಲಿದ್ದರೂ ಈ ಧರ್ಮ ಶಾಲೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸದಿರುವ ಬಗ್ಗೆ ಜಿಲ್ಲಾಧಿಕಾರಿಗಳು, ಗುಲ್ಬರ್ಗಾರವರು ಸದರಿ ಸಂಸ್ಥೆಯಲ್ಲಿ ಯಾವುದೇ ದೇವಸ್ಥಾನ ಇಲ್ಲದೇ ಇರುವುದರಿಂದ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿರುವುದಿಲ್ಲ ಹಾಗೂ ಸಂಸ್ಥೆಗೆ ಸೇರಿದ

ಮಳಿಗೆಗಳನ್ನು ಅನಧಿಕೃತದಾರರು ಅನುಭವಿಸಿಕೊಂಡು ದುರುಪಯೋಗಪಡಿಸುತ್ತಿರುವುದನ್ನು ತಪ್ಪಿಸಲು ಹಾಗೂ ಅನಧಿಕೃತದಾರರನ್ನು ತೆರವುಗೊಳಿಸಲು ಸಂಸ್ಥೆಯ ಆಡಳಿತವನ್ನು ಇಲಾಖೆಯ ಸುಪರ್ದಿಗೆ ತೆಗೆದುಕೊಳ್ಳುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಮುಂದುವರೆದು, ಸದರಿ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸದೇ ಅನಧಿಕೃತವಾಗಿ ಅಂಗಡಿಗಳನ್ನು ನಡೆಸುತ್ತಿರುವವರನ್ನು ಹೊರ ಹಾಕಲು ಅವಕಾಶವಿಲ್ಲವಾದ್ದರಿಂದ ಈ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವುದು ಅವಶ್ಯಕವಾಗಿದ್ದು, ಈ ಸಂಸ್ಥೆಯನ್ನು ಹಿಂದಿನ ಹೈದರಾಬಾದ್ ಎಂಡೋಮೆಂಟ್ಸ್ ರೆಗ್ಯೂಲೇಷನ್ಸ್ ಪ್ರಕಾರ ಬುಕ್ ಆಫ್ ಎಂಡೋಮೆಂಟ್‌ನಲ್ಲಿ ಕ್ರಮ ಸಂಖ್ಯೆ: (52)ರಲ್ಲಿ ದಾಖಲಾಗಿರುತ್ತದೆ. ಆದುದರಿಂದ ಗುಲ್ಬರ್ಗಾ ಜಿಲ್ಲೆ ಚಿತ್ತಾಪುರ ತಾಲ್ಲೂಕಿನ ವಾಡಿಯ ಶ್ರೀ ರಾಜಾಕಂದಸ್ವಾಮಿ ಧರ್ಮ ಶಾಲೆಯನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಪ್ರಕಟಣೆಯನ್ನು ಹೊರಡಿಸುವಂತೆ ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 82 ಮುಆಬಿ 2010, ಬೆಂಗಳೂರು, ದಿನಾಂಕ : 20.09.2010**

ಪ್ರಸ್ತಾವನೆಯನ್ನು ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಜಿಲ್ಲೆ, ಚಿತ್ತಾಪುರ ತಾಲ್ಲೂಕಿನ ವಾಡಿಯ ಶ್ರೀ ರಾಜಾಕಂದಸ್ವಾಮಿ ಧರ್ಮ ಶಾಲೆಯನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಸೆಕ್ಷನ್ 23 (2)ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 2524

## ಕಂದಾಯ ಸಚಿವಾಲಯ

**ವಿಷಯ :** ಬಿಜಾಪುರ ನಗರದಲ್ಲಿ ವಿಮಾನ ನಿಲ್ದಾಣ ಸ್ಥಾಪಿಸುವ ಸಲುವಾಗಿ ಸರ್ಕಾರಿ ಜಮೀನು ಒದಗಿಸುವ ಬಗ್ಗೆ.

**ಓದಲಾಗಿದೆ :** 1) ಜಿಲ್ಲಾಧಿಕಾರಿಗಳು ಬಿಜಾಪುರ ಜಿಲ್ಲೆ ರವರ ಪತ್ರ ಸಂಖ್ಯೆ: ಆರ್‌ಡಿ:ಎಲ್ಎನ್‌ಡಿ/ ಸಿಆರ್/127/00-01 ದಿನಾಂಕ: 3-10-2008.

**ಪ್ರಸ್ತಾವನೆ :**

ಮೇಲೆ ಓದಲಾದ ದಿ: 03.10.2008ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರು ಬಿಜಾಪುರ ನಗರದಲ್ಲಿ ವಿಮಾನ ನಿಲ್ದಾಣ ಸ್ಥಾಪಿಸಲು ಕೇಂದ್ರ ಸರ್ಕಾರವು ಅನುಮೋದನೆ ನೀಡಿದ್ದು, ಇದಕ್ಕಾಗಿ 364.16 ಎಕರೆ ಖಾಸಗಿ ಜಮೀನು ಹಾಗೂ ಬಿಜಾಪುರ ತಾಲ್ಲೂಕು, ಬುರಣಾಪುರ, ಅಲಿಯಾಬಾದ ಮತ್ತು ಮದಬಾವಿ, ಗ್ರಾಮಗಳಲ್ಲಿ ವಿವಿಧ ಸರ್ವೆ ನಂಬರ್‌ಗಳಲ್ಲಿನ ಒಟ್ಟು ವಿಸ್ತೀರ್ಣ 347-33 ಎಕರೆ ಸರ್ಕಾರಿ ಜಮೀನನ್ನು ಸದರಿ ಉದ್ದೇಶಕ್ಕಾಗಿ ಕೆ.ಐ.ಎ.ಡಿ.ಬಿ.ಗೆ ಹಸ್ತಾಂತರಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಗ್ರಾಮಗಳಲ್ಲಿ ಒಟ್ಟು 585.24ಎ/ಗು ಸರ್ಕಾರಿ ಜಮೀನಿದ್ದು, ಇವುಗಳು ಗೋಮಾಳ ಮತ್ತು ಮರಡಿ ಜಮೀನುಗಳಾಗಿದ್ದು, ಪ್ರಸ್ತುತ ಇಲ್ಲಿ ಯಾವುದೇ ಬೇಸಾಯ ನಡೆಯುತ್ತಿಲ್ಲವಾದ್ದರಿಂದ ಈ ಮೇಲಿನ ಜಮೀನಿನ ಪೈಕಿ 347-33ಎ/ಗು ಜಮೀನನ್ನು ಬಿಜಾಪುರ ನಗರದಲ್ಲಿ ವಿಮಾನ ನಿಲ್ದಾಣ ಸ್ಥಾಪನೆಗಾಗಿ ಕೆ.ಐ.ಎ.ಡಿ.ಬಿ.ಗೆ ಹಸ್ತಾಂತರಿಸಲು ಪ್ರಸ್ತಾಪಿಸಲಾಗಿದೆ.

ವಿಮಾನ ನಿಲ್ದಾಣವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವ ಆಧಾರದ ಮೇಲೆ (PPP Model) ಅಭಿವೃದ್ಧಿ ಪಡಿಸಲಾಗುತ್ತಿದ್ದು, 247-33ಎ/ಗು ಸರ್ಕಾರಿ ಜಮೀನಿನೊಂದಿಗೆ ಹೆಚ್ಚುವರಿಯಾಗಿ 100 ಎಕರೆ ಜಮೀನನ್ನು ಬುರಣಾಪುರ ಗ್ರಾಮದ ರಿ.ಸ.ನಂ. 18 ಅಥವಾ 23ರಲ್ಲಿ ಇತರೆ ಅಭಿವೃದ್ಧಿ ಚಟುವಟಿಕೆಗಳಾದ ವಿಮಾನಯಾನ ಕೈಗಾರಿಕೆಗಳು, ಐ.ಟಿ./ಬಿ.ಟಿ. ಪಾರ್ಕುಗಳು, ಕಾರ್ಗೋ ಕಾಂಪ್ಲೆಕ್ಸ್, ಪ್ರವಾಸೋದ್ಯಮದ ಅಭಿವೃದ್ಧಿಗೆ ಬೇಕಾಗುವ ಮೂಲ ಸೌಲಭ್ಯಗಳು, (ಹೋಟೆಲ್, ರೆಸಾರ್ಟ್ ಇತ್ಯಾದಿ) ಮತ್ತು ರಫ್ತು ಆಧಾರಿತ ಆಹಾರ ಸಂಸ್ಕರಣೆ ಕೈಗಾರಿಕೆಗಳು ಇತ್ಯಾದಿಗಳನ್ನು ಸ್ಥಾಪಿಸುವ ಸಲುವಾಗಿ ಕೆ.ಐ.ಎ.ಇ.ಡಿ.ಬಿ.ಗೆ ಹಸ್ತಾಂತರಿಸಲು ಜಿಲ್ಲಾಧಿಕಾರಿಗಳು ಕೋರಿದ್ದಾರೆ.

ದಿನಾಂಕ: 10/9/2008ರಂದು ಬೆಲೆ ನಿರ್ಧರಣಾ ಸಮಿತಿಯಲ್ಲಿ ವಿಮಾನ ನಿಲ್ದಾಣ ಮತ್ತು ಇತರೆ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ ಕೆ.ಐ.ಎ.ಡಿ.ಬಿ.ಗೆ ಹಸ್ತಾಂತರಿಸಬೇಕಾಗಿರುವ ಜಮೀನುಗಳ ಬೆಲೆಗಳನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ:

| ಕ್ರ. ಸಂ. | ಗ್ರಾಮ ಹಾಗೂ ರಿ.ಸ.ನಂ. ಮತ್ತು ಕ್ಷೇತ್ರ | ಹಸ್ತಾಂತರಿಸಲು ಉದ್ದೇಶಿಸಿದ ಕ್ಷೇತ್ರ ಅಂದಾಜು ಕ್ಷೇತ್ರ | ಮಾರ್ಗಸೂಚಿ ಬೆಲೆ ಪ್ರಕಾರ ಜಮೀನಿನ ಒಟ್ಟು ಮೌಲ್ಯ (ರೂ.) | ದಿನಾಂಕ: 10/9/2008ರಂದು ಬೆಲೆ ನಿರ್ಧರಣಾ ಸಮಿತಿ ನಿಗದಿಪಡಿಸಿದ ದರದಂತೆ ಒಟ್ಟು ಮೌಲ್ಯ (ರೂ.) |
|---|---|---|---|---|
| 1 | ಬುರಣಾಪುರ ಗ್ರಾಮದ ಸರ್ಕಾರದ ರಿ.ಸ.ನಂ.23 ಕ್ಷೇತ್ರ 330-21ರಲ್ಲಿ | 13-00 | 44,20,000 | 11,70,00,000 |
| 2 | ಬುರಣಾಪುರ ಗ್ರಾಮದ ಸರ್ಕಾರದ ರಿ.ಸ.ನಂ. 18 ಕ್ಷೇತ್ರ 178-00ರಲ್ಲಿ | 102-20 | 34,85,000 | 9,22,50,000 |
| 3 | ಅಲಿಯಾಬಾದ ಗ್ರಾಮದ ಸರ್ಕಾರದ ರಿ.ಸ.ನಂ. 167 ಕ್ಷೇತ್ರ 22-07 ರಲ್ಲಿ | 13-25 | 4,08,750 | 1,17,36,000 |
| 4 | ಮದಭಾವಿ ಗ್ರಾಮದ ಸರ್ಕಾರದ ರಿ.ಸ.ನಂ. 8ರ ಪೈಕಿ ಕ್ಷೇತ್ರ 54-36ರಲ್ಲಿ | 1.28 | 37,400 | 15,30,000 |

| | | | | |
|---|---|---|---|---|
| 5 | ವಿಮಾನಯಾನಕ್ಕೆ ಸಂಬಂಧಿಸಿದಂತೆ, ಇತರೆ ಉದ್ದೇಶಕ್ಕೆ ಹೆಚ್ಚುವರಿಯಾಗಿ ಹಸ್ತಾಂತರಿಸಲು ಉದ್ದೇಶಿಸಿರುವ ಜಮೀನು ಬುರಣಾಪುರ ಗ್ರಾಮದ ರಿ.ಸ.ನಂ. 18 ಮತ್ತು 23ರಲ್ಲಿ ಸೂಕ್ತವೆನಿಸಿದ ಜಮೀನು | 100–00 | 34,00,000 | 9,00,00,000 |
| | **ಒಟ್ಟು** | **347.33** | **1,17,51,150** | **31,25,16,000** |

ವಿಶೇಷ ಭೂ ಸ್ವಾಧೀನ ಅಧಿಕಾರಿಗಳು, ಕೆ.ಐ.ಎ.ಡಿ.ಬಿ.ಗೆ, ಧಾರವಾಡ ಇವರು ದಿನಾಂಕ: 28/7/2008ರ ಪತ್ರದಲ್ಲಿ ಸರ್ಕಾರಿ ಜಮೀನಿಗೆ ಸೂಚಿಸಿದ ಬೆಲೆಯನ್ನು ಕೆ.ಐ.ಎ.ಡಿ.ಬಿ.ಯಿಂದ ಭರಣ ಮಾಡುವುದಾಗಿ ಒಪ್ಪಿಗೆ ನೀಡಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ: 42:ಎಲ್‌ಜಿಜೆ:2007, ಬೆಂಗಳೂರು ದಿನಾಂಕ : 25–9–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಬಿಜಾಪುರ ನಗರದಲ್ಲಿ ವಿಮಾನ ನಿಲ್ದಾಣ ಸ್ಥಾಪನೆಗಾಗಿ ಹಾಗೂ ಇತರೆ ಅಭಿವೃದ್ಧಿ ಚಟುವಟಿಕೆಗಳಿಗಾಗಿ ಬಿಜಾಪುರ ಜಿಲ್ಲೆಯ ಬುರಣಾಪುರ, ಮದಬಾವಿ, ಮತ್ತು ಅಲಿಯಾಬಾದ ಗ್ರಾಮಗಳ ವಿವಿಧ ಸರ್ವೆ ನಂಬರುಗಳ ಒಟ್ಟು ವಿಸ್ತೀರ್ಣ 347.13 ಎಕರೆ ಸರ್ಕಾರಿ ಹುಲ್ಲುಗಾವಲು ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97 (4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ ಜಮೀನಿಗೆ ಬೆಲೆ ನಿರ್ಧರಣಾ ಸಮಿತಿ ನಿಗದಿಪಡಿಸಿರುವ ರೂ. 31,25,16,000.00/– ದರ (ರೂಪಾಯಿ ಮೂವತ್ತೊಂದು ಕೋಟಿ ಇಪ್ಪತ್ತೈದು ಲಕ್ಷದ ಹದಿನಾರು ಸಾವಿರ ರೂ.ಗಳು ಮಾತ್ರ) ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರಿಗೆ ಹಸ್ತಾಂತರಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:FD 621 EXP-1/2009 ದಿ: 31–3–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ–3)

ಪಿ.ಆರ್. 2525

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು, ವಿಜಯಪುರ ಹೋಬಳಿ, ವಿಜಯಪುರ ಗ್ರಾಮದ ಸ.ನಂ.161 ರಲ್ಲಿ 4 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/4/09–10, ದಿ: 02.06.2009.
2) ಸರ್ಕಾರದ ಕಾರ್ಯದರ್ಶಿ, ಕಂದಾಯ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಕೆಪಿಎಲ್‌ಸಿ/ಎಲ್‌ಎನ್‌ಡಿ/253/2009–10, ದಿ: 30–04–2010.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿ: 02.06.2009ರ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು, ವಿಜಯಪುರ ಹೋಬಳಿ, ವಿಜಯಪುರ ಗ್ರಾಮದ ಸ.ನಂ.161ರಲ್ಲಿ 4 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಹಾಗೂ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವರದಿಯನ್ವಯ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು, ವಿಜಯಪುರ ಹೋಬಳಿ, ವಿಜಯಪುರ ಗ್ರಾಮದ ಸ.ನಂ.161ರಲ್ಲಿ 18.28 ಎಕರೆ ಜಮೀನಿದ್ದು, ಗುಂಡುತೋಪು ಶೀರ್ಷಿಕೆಯಲ್ಲಿರುತ್ತದೆ. ಈ ಪೈಕಿ ಈಗಾಗಲೇ ಆರೋಗ್ಯ ಇಲಾಖೆಗೆ 2 ಎಕರೆ, ಸಮಾಜ ಕಲ್ಯಾಣ ಇಲಾಖೆಗೆ 25 ಗುಂಟೆ, ಹಣ್ಣು ಮತ್ತು ತರಕಾರಿ ನಿಗಮಕ್ಕೆ 4 ಎಕರೆ ಮತ್ತು ಪೊಲೀಸ್ ಇಲಾಖೆಗೆ 6 ಎಕರೆ ಜಮೀನು ಮಂಜೂರಾಗಿರುತ್ತದೆ. 2 ಎಕರೆ ಜಮೀನನ್ನು ನೀರಿನ ಕಟ್ಟೆಗಾಗಿ ಮೀಸಲಿರಿಸಲಾಗಿರುತ್ತದೆ. ಉಳಿದ 4 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಮಂಜೂರು ಮಾಡಲು ಪ್ರಸ್ತಾವಿಸಿರುತ್ತಾರೆ. ಸದರಿ ಜಮೀನಿನಲ್ಲಿ ವಿವಿಧ ಜಾತಿಯ 4–20 ವರ್ಷವಿರುವ 48 ಮರಗಳಿದ್ದು, ಇವುಗಳ ಬಗ್ಗೆ ಅರಣ್ಯ ಇಲಾಖೆಯಿಂದ ಬೆಲೆ ನಿಗದಿ ಪಡಿಸಿಕೊಂಡು ಮಂಜೂರು ಮಾಡಬಹುದೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಸದರಿ ಜಮೀನಿನ ಮಾರುಕಟ್ಟೆ ಬೆಲೆಯು ಎಕರೆಯೊಂದಕ್ಕೆ ರೂ.50 ಲಕ್ಷ ಇರುವುದಾಗಿ ವರದಿ ಮಾಡಿರುತ್ತಾರೆ. ಪುರಸಭೆ ವಿಜಯಪುರ ಇವರು ಸದರಿ ಜಮೀನನ್ನು ಕರ್ನಾಟಕ ರಾಜ್ಯ ಸಾರಿಗೆ ನಿಗಮಕ್ಕೆ ಮಂಜೂರು ಮಾಡಲು ಪುರಸಭೆಯ ಆಕ್ಷೇಪಣೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ಸರ್ಕಾರದ ಕಾರ್ಯದರ್ಶಿ, ಕಂದಾಯ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ: 30.04.2010ರ ಅರೆ ಸರ್ಕಾರಿ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಪ್ರಾದೇಶಿಕ ಆಯುಕ್ತರ ವರದಿಯನ್ವಯ ಸದರಿ ಜಮೀನು ತೋಪು ಲಕ್ಷಣಗಳನ್ನು ಕಳೆದುಕೊಂಡಿಲ್ಲವಾದರೂ ಈಗಾಗಲೇ ವಿವಿಧ ಇಲಾಖೆಗಳಿಗೆ ಈ ಜಮೀನಿನಲ್ಲಿ ವಿವಿಧ

ವಿಸ್ತೀರ್ಣದ ಜಮೀನನ್ನು ಮಂಜೂರು ಮಾಡಲಾಗಿರುವುದರಿಂದ 4 ಎಕರೆ ಜಮೀನನ್ನು ಕೆ.ಎಸ್.ಆರ್.ಟಿ.ಸಿ.ಗೆ ಮಂಜೂರು ಮಾಡಬಹುದೆಂದು, ಆದರೂ ಹಾಲಿ ಜಮೀನಿನಲ್ಲಿರುವ ಮರಗಳನ್ನು ಹಾಗೆಯೇ ಉಳಿಸಿಕೊಂಡ ಕಟ್ಟಡಗಳನ್ನು ನಿರ್ಮಿಸುವಂತೆ ಕೆ.ಎಸ್.ಆರ್.ಟಿ.ಸಿ.ಗೆ ತಿಳಿಸಬಹುದಾಗಿದೆ ಎಂದು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 453 ಎಲ್‌ಜಿಬಿ 2009, ಬೆಂಗಳೂರು, ದಿನಾಂಕ : 25-09-2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು, ವಿಜಯಪುರ ಹೋಬಳಿ, ವಿಜಯಪುರ ಗ್ರಾಮದ ಸ.ನಂ.161ರಲ್ಲಿ 4 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ)ರನ್ವಯ ಪ್ರಸಕ್ತ ಮಾರುಕಟ್ಟೆ ದರದ ಶೇ. 50ರಷ್ಟು ದರ ವಿಧಿಸಿ ಹಾಗೂ ಸದರಿ ಜಮೀನಿನಲ್ಲಿರುವ ಹಾಲಿ ಮರಗಳನ್ನು ಹಾಗೆಯೇ ಉಳಿಸಿಕೊಂಡು ಕಟ್ಟಡಗಳನ್ನು ನಿರ್ಮಿಸುವಂತೆ ಷರತ್ತು ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಸದರಿ ಜಮೀನನ್ನು ಒತ್ತುವರಿಯಿಂದ ಸಂರಕ್ಷಿಸಿಕೊಳ್ಳಲು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಕ್ರಮ ವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 119 ವೆಚ್ಚ-7/2010, ದಿ: 16.02.2010ರಲ್ಲಿ ನೀಡಿದ ಸಹಮತಿ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಇ. ಈಶ್ವರ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ)

ಪಿ.ಆರ್. 2526

## ENERGY SECRETARIAT

**Sub** : Transfer of 1.5 MW wind power capacity in favour of M/s Orient Abrasives Limited-reg.

**Read** :
1. Government Order No: EN 191 NCE 2005 dated: 19.08.2005.
2. Government Order No: EN 100 NCE 2005 dated: 30.08.2005.
3. Government Order No: EN 178 NCE 2008 dated: 24.12.2008.
4. Letter No: KRED/08/OAL (KAL-14)-SIL/2010/2537 dated: 25.08.2010, 3/6.09.2010 received from the Managing Director, Karnataka Renewable Energy Development Limited, Bangalore.

**PREAMBLE :**

In the Government Order read at (1) above, sanction has been accorded to implement 82.6 MW capacity wind power project at Raichur and Bellary district to M/s Suzlon Developers Limited.

In the Government Order read at (2) above, sanction has been accorded for change of company's name from M/s Suzlon Developers Limited and M/s Suzlon Developers Private Limited to M/s Suzlon Infrastructure Limited.

In the Government Order read at (1) above, sanction has been accorded for enhancement of wind power sanctioned capacity from 7.20 MW to 30.00 MW of M/s Suzlon Infrastructure Limited at Kalmangi site of Raichur District.

In the letter read at (4) above, the Managing Director, Karnataka Renewable Energy Development Limited, Bangalore has recommended to the Government for transfer of 1.5 MW wind power capacity in favour of M/s Orient Abrasives Limited from out of the 30.00 MW capacity sanctioned in favour of M/s Suzlon Infrastructure Limited at Kalmangi site Sindanur Taluk, Raichur District and further the M.D., KREDL has stated the proposed transferred project is scheduled for commissioning during the Financial year 2010-11.

The proposal has been examined in detail and issued following Orders:

**GOVERNMENT ORDER NO : EN 388 NCE 2010, BANGALORE, DATED : 27.09.2010.**

Government accords approval for transfer of 1.5 MW wind power capacity in favour of M/s Orient Abrasives Limited from out of the 30.00 MW capacity sanctioned in favour of M/s Suzlon Infrastructure Limited at Kalmangi site in land Sy. No. 262 of Kalmangi village, Sindanur Taluk, Raichur District as detailed below and subject to the following conditions:

| Village Name | Taluk & District | Land Survey Number | Extent in land | Wind Turbine Generator location No. |
|---|---|---|---|---|
| Kalmangi | Sindanur/ Raichur | 262 | 2 Acres per WTG capacity 1.5 MW for 1 No. | KAL-14 |

1. M/s Orient Abrasives Limited shall execute an agreement with Government within 45 (forty five) days from the date of issue of this Order.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್.ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 2557

## ಇಂಧನ ಸಚಿವಾಲಯ

**ವಿಷಯ :** M/s Rising Sun Power Pvt. Ltd. ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸುವರ್ಣ ಮುಖಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಸುವರ್ಣಮುಖಿ ಕಿಜವಿ/2010/1853 ದಿನಾಂಕ: 16/21.06.2010.
2. ದಿನಾಂಕ: 06.08.2010 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Rising Sun Power Pvt. Ltd. ಇವರಿಗೆ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ, ಕರಗೌಡನದೊಡ್ಡಿ ಗ್ರಾಮದ ಬಳಿ ಸುವರ್ಣಮುಖಿ ಮತ್ತು ವೃಷಭಾವತಿ ನದಿಗಳ ಸಂಗಮ ಸ್ಥಳದಲ್ಲಿ ಈಗಾಗಲೇ ನಿರ್ಮಾಣಗೊಂಡಿರುವ ಒಡ್ಡಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸುವರ್ಣ ಮುಖಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Rising Sun Power Pvt. Ltd. ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ : ಇಎನ್ 264 ಎನ್‌ಸಿಇ 2010, ಬೆಂಗಳೂರು, ದಿನಾಂಕ : 16.09.2010.**

M/s Rising Sun Power Pvt. Ltd. ಇವರಿಗೆ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ, ಕರಗೌಡನದೊಡ್ಡಿ ಗ್ರಾಮದ ಬಳಿ ಸುವರ್ಣಮುಖಿ ಮತ್ತು ವೃಷಭಾವತಿ ನದಿಗಳ ಸಂಗಮ ಸ್ಥಳದಲ್ಲಿ ಈಗಾಗಲೇ ನಿರ್ಮಾಣಗೊಂಡಿರುವ ಒಡ್ಡಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸುವರ್ಣ ಮುಖಿ ಕಿರು ಜಲ ವಿದ್ಯುತ್ ಯೋಜನೆಯನ್ನು (**Weir Latitude:** $12^0$39'34" **Longitude:** $77^0$24'55" Power House-**Latitude:** $12^0$39'17" **Longitude:** $77^0$24'54") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಾಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್.ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್. 2558

## ಇಂಧನ ಸಚಿವಾಲಯ

**ವಿಷಯ** : M/s Samrudhi Hydro Energy ಇವರಿಗೆ 1.22 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ ಕೆಆರ್‌ಇಡಿ/06/ಕೆಆರ್‌ಎಸ್‌ಎಂಹೆಚ್‌ಎಸ್/2009/3201/ ದಿನಾಂಕ: 25/30.09.2010 ಮತ್ತು ಸಂಖ್ಯೆ : ಕೆಆರ್‌ಇಡಿ/06/ಕೆಆರ್‌ಎಸ್–ಎಂಹೆಚ್‌ಎಸ್/2010/503 ದಿನಾಂಕ: 6/23.06.2010

2. ದಿನಾಂಕ: 06.08.2010 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Samrudhi Hydro Energy ಇವರಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಕನ್ನಂಬಾಡಿ ಗ್ರಾಮದ ಬಳಿ ಕೆ.ಆರ್.ಎಸ್. ಅಣೆಕಟ್ಟಿನ ಕೆಳತೊರೆಯ ಬಲದಂಡೆ ಕಾಲುವೆಯ low level ಕೆನಾಲ್‌ಗೆ ಅಡ್ಡಲಾಗಿ 1.22 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Samrudhi Hydro Energy ಇವರಿಗೆ 1.22 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ : ಇಎನ್ 511 ಎನ್‌ಸಿಇ 2009, ಬೆಂಗಳೂರು, ದಿನಾಂಕ : 17.09.2010.**

M/s Samrudhi Hydro Energy ಇವರಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಕನ್ನಂಬಾಡಿ ಗ್ರಾಮದ ಬಳಿ ಕೆ.ಆರ್.ಎಸ್. ಅಣೆಕಟ್ಟಿನ ಕೆಳತೊರೆಯ ಬಲದಂಡೆ ಕಾಲುವೆಯ low level ಕೆನಾಲ್‌ಗೆ ಅಡ್ಡಲಾಗಿ 1.22 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (**Weir Latitude:** $12^0$26'20" **Longitude:** $76^0$36'10" Power House-**Latitude:** $12^0$26'10" **Longitude:** $76^0$36'00") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಾಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಾಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್.ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 2559

## ಇಂಧನ ಸಚಿವಾಲಯ

**ವಿಷಯ :** M/s Sai Krishna Hydro Power Private Limited ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ಹಂಚಿನಾಲ್ ಕಿಜವಿ/2010/2328 ದಿನಾಂಕ: 5.08.2010.

3. ದಿನಾಂಕ: 06.08.2010 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Sai Krishna Hydro Power Private Limited ಇವರಿಗೆ ರಾಯಚೂರು ಜಿಲ್ಲೆಯ ಲಿಂಗಸೂಗುರು ತಾಲ್ಲೂಕಿನ ಹಂಚಿನಾಲ್ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Sai Krishna Hydro Power Private Limited ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ : ಇಎನ್ 348 ಎನ್‌ಸಿಇ 2010, ಬೆಂಗಳೂರು, ದಿನಾಂಕ : 16.09.2010.**

M/s Sai Krishna Hydro Power Private Limited ಇವರಿಗೆ ರಾಯಚೂರು ಜಿಲ್ಲೆಯ ಲಿಂಗಸೂಗುರು ತಾಲ್ಲೂಕಿನ ಹಂಚಿನಾಲ್ ಗ್ರಾಮದ ಬಳಿ ಕೃಷ್ಣ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (**Weir Latitude:** 16$^{0}$12'15" **Longitude:** 76$^{0}$27'26" Power House-**Latitude:** 16$^{0}$14'52" **Longitude:** 76$^{0}$28'04") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಾಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಾಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಂಡಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಾಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್.ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 2560

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಪರಿಮೀಕ್ಷಣಾ ಇಲಾಖೆಯ ಕಛೇರಿಗಳಿಗೆ ಕಂಪ್ಯೂಟರ್ ಸಿಸ್ಟಂಗಳನ್ನು ಖರೀದಿಸಲು ಇಲಾಖಾ ತಾಂತ್ರಿಕ ಸಲಹಾ ಸಮಿತಿಯ (TAP) ಪುನರ್ ರಚನೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಪಿಡಿ 121 ಸಿಎಸ್‌ಎಸ್ 97 ದಿನಾಂಕ: 08.01.1998.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 131 ಇಬಿಎಸ್ 2007 ದಿನಾಂಕ: 15.03.2008.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 134 ವಿಮಾಆ 2009 ದಿನಾಂಕ: 19.07.2010.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿರುವ ಸರ್ಕಾರಿ ಇಲಾಖೆಗಳ ವಿಕೇಂದ್ರೀಕರಣಕ್ಕಾಗಿ ಕಂಪ್ಯೂಟರ್‌ಗಳನ್ನು ಖರೀದಿಸಲು ಹಾಗೂ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಇಲಾಖಾ ಕಾರ್ಯದರ್ಶಿಯವರ ಅಧ್ಯಕ್ಷತೆಯನ್ನೊಳಗೊಂಡ ಇಲಾಖಾ ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಲು ಅನುಮೋದನೆ ನೀಡಲಾಗಿತ್ತು.

ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಕಛೇರಿಗಳಿಗೆ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯಲು/ ಖರೀದಿಸಲು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸೂಚಿಸಿರುವ ಸದಸ್ಯರನ್ನೊಳಗೊಂಡಂತೆ ಇಲಾಖಾ ತಾಂತ್ರಿಕ ಸಲಹಾ ಸಮಿತಿಯ (TAP) ನ್ನು ಪುನರ್ ರಚಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರಿ ಇಲಾಖೆಗಳಿಗೆ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯುವ ಸಲುವಾಗಿ ಹಾಗೂ ವಿವಿಧ ಇಲಾಖೆಗಳ ಗಣಕೀಕರಣದ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಲು ಇಂಧನ ಇಲಾಖೆಯ ಇಲಾಖಾ ತಾಂತ್ರಿಕ ಸಲಹಾ ಸಮಿತಿಗೆ ಈ ಕೆಳಕಂಡ ತಾಂತ್ರಿಕ ಸದಸ್ಯರನ್ನು ನಾಮ ನಿರ್ದೇಶನ ಮಾಡಿ, ಈ ತಾಂತ್ರಿಕ ಸದಸ್ಯರೊಂದಿಗೆ ತಾಂತ್ರಿಕ ಸಲಹಾ ಸಮಿತಿಯನ್ನು ಪುನರ್‌ರಚಿಸಿಕೊಳ್ಳುವಂತೆ ಆದೇಶಿಸಿಲಾಗಿದೆ.

| | |
|---|---|
| 1 | ಪ್ರೊ:ಡಿ.ಕೃಷ್ಣ ಸುಂದರ್<br>ಪ್ರೊಡಕ್ಷನ್ ಅಂಡ್ ಆಪರೇಷನ್ಸ್ ಮ್ಯಾನೇಜ್‌ಮೆಂಟ್ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ |
| 2 | ಪ್ರೊ: ಚಂದ್ರಶೇಖರ್ ರಾಮನಾಥನ್<br>ಇಂಟರ್ ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ಇನ್ಫರ್ಮೇಷನ್ ಟೆಕ್ನಾಲಜಿ |

ಅದರಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 96 ಇಬಿಎಸ್ 2010 ದಿನಾಂಕ : 15.09.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಕಛೇರಿಗಳಿಗೆ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯಲು/ಖರೀದಿಸಲು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಇಲಾಖಾ ತಾಂತ್ರಿಕ ಸಲಹಾ ಸಮಿತಿಯ (TAP)ನ್ನು ಪುನರ್ ರಚಿಲಾಗಿದೆ:

1. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ – ಅಧ್ಯಕ್ಷರು
2. ಮುಖ್ಯ ವಿದ್ಯುತ್ ಪರಿವೀಕ್ಷಕರು – ಸದಸ್ಯರು
3. ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ – ಸದಸ್ಯರು
4. ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಯವ್ಯಯ–2) – ಸದಸ್ಯರು
5. ಪ್ರೊ:ಡಿ.ಕೃಷ್ಣ ಸುಂದರ್
ಪ್ರೊಡಕ್ಷನ್ ಅಂಡ್ ಆಪರೇಷನ್ಸ್ ಮ್ಯಾನೇಜ್‌ಮೆಂಟ್
ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ – ಸದಸ್ಯರು

6. ಪ್ರೊ: ಚಂದ್ರಶೇಖರ್ ರಾಮನಾಥನ್
ಇಂಟರ್ ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್
ಇನ್ಫರ್ಮೇಷನ್ ಟೆಕ್ನಾಲಜಿ – ಸದಸ್ಯರು
7. ನಿರ್ದೇಶಕರು, ಯೋಜನಾ ಇಲಾಖೆ – ಸದಸ್ಯರು
8. ನಿರ್ದೇಶಕರು, ನ್ಯಾಷನಲ್ ಇನ್‌ಫಾರ್ಮೆಟಿಕ್ ಸೆಂಟರ್ – ಸದಸ್ಯರು
9. ನಿರ್ದೇಶಕರು ಪ್ರತಿನಿಧಿ, ಇ–ಆಡಳಿತ – ಸದಸ್ಯರು

ಮೇಲಿನ ತಾಂತ್ರಿಕ ಸಲಹಾ ಸಮಿತಿಯು, ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಕಛೇರಿಗಳಿಗೆ ಹಾರ್ಡ್‌ವೇರ್, ಸಾಫ್ಟ್‌ವೇರ್ ಇತರೇ ಪರಿಕರ ಮತ್ತು ಸೇವೆಗಳನ್ನು ಪಡೆಯಲು/ಖರೀದಿಸಲು ದಿನಾಂಕ: 18.06.1998ರ ಕರ್ನಾಟಕ ಸರ್ಕಾರ ಗಣಕ ಕೇಂದ್ರದ ಪತ್ರ ಸಂಖ್ಯೆ: ಜಿಸಿಸಿ/ಟ್ಯಾಪ್/385/97–98 ರಲ್ಲಿನ ಮಾರ್ಗಸೂಚಿಯನ್ನು ಅನುಸರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುಜಾತಮ್ಮ**
ಪೀಠಾಧಿಕಾರಿ, ಇಂಧನ ಇಲಾಖೆ.

ಪಿ.ಆರ್. 2561

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾಸಿಕ ದರದ ಸಿಬ್ಬಂದಿಯಾಗಿ ಕಾರ್ಯನಿರ್ವಹಿಸುತ್ತಿರುವ ಪದವೀಧರ ಇಂಜಿನಿಯರುಗಳು ಮತ್ತು ಡಿಪ್ಲೊಮಾ ಇಂಜಿನಿಯರುಗಳಿಗೆ ಸಂಚಿತ ವೇತನವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ಸೇಸ್ಥಅ 94 ದಿನಾಂಕ: 29.9.1994.
(2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಸೇಸ್ಥಅ 99 ದಿನಾಂಕ: 31.5.1999.

**ಪ್ರಸ್ತಾವನೆ :**

ವಿವಿಧ ಇಲಾಖೆಗಳಲ್ಲಿ ದಿನಗೂಲಿಯ ಮೇಲೆ ನೇಮಕವಾಗಿರುವ ಪದವೀಧರ ಇಂಜಿನಿಯರ್ ಮತ್ತು ಡಿಪ್ಲೊಮಾ ಇಂಜಿನಿಯರುಗಳನ್ನು ಮಾಸಿಕ ದರದ ಸಿಬ್ಬಂದಿಯಾಗಿ ಪರಿವರ್ತಿಸಿ ಪದವೀಧರ ಇಂಜಿನಿಯರುಗಳಿಗೆ ಮಾಸಿಕ ರೂ.2050/– ಹಾಗೂ ಡಿಪ್ಲೊಮಾ ಇಂಜಿನಿಯರುಗಳಿಗೆ ಮಾಸಿಕ ರೂ. 1520/– ಸಂಚಿತ ವೇತನವನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 29.9.1994 ರ ಆದೇಶದನ್ವಯ ನೀಡಲಾಗುತ್ತಿದ್ದು ನಂತರ ಮೇಲೆ (2) ರಲ್ಲಿ ಓದಲಾದ ದಿನಾಂಕ: 31.5.1999 ರ ಆದೇಶದನ್ವಯ ಈ ಪದವೀಧರ ಇಂಜಿನಿಯರುಗಳಿಗೆ ರೂ. 6000/– ಕ್ಕೆ ಮತ್ತು ಡಿಪ್ಲೊಮಾ ಇಂಜಿನಿಯರುಗಳಿಗೆ ರೂ. 4575/– ಕ್ಕೆ ಸಂಚಿತ ವೇತನವನ್ನು ಪರಿಷ್ಕರಿಸಿ ನೀಡಲಾಗುತ್ತಿದೆ. ಹಿಂದಿನ ವೇತನ ಶ್ರೇಣಿಯ ಮೂಲ ವೇತನದಂತೆ ಈ ಸಂಚಿತ ವೇತನವನ್ನು ನಿಗದಿಪಡಿಸಿರುವುದರಿಂದ ಪರಿಷ್ಕೃತ ವೇತನ ಶ್ರೇಣಿಯ ಸೌಲಭ್ಯವನ್ನು ಮಾಸಿಕ ದರದ ಸಿಬ್ಬಂದಿಗೂ ನೀಡುವಂತೆ ಲೋಕೋಪಯೋಗಿ, ನೀರಾವರಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪದವೀಧರ ಇಂಜಿನಿಯರುಗಳು ಮತ್ತು ಡಿಪ್ಲೊಮಾ ಇಂಜಿನಿಯರುಗಳು ಸರ್ಕಾರವನ್ನು ಕೋರಿರುತ್ತಾರೆ. ಈ ಬಗ್ಗೆ ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 93 ಸೇಸ್ಥಅ 2010 ಬೆಂಗಳೂರು, ದಿನಾಂಕ : 25.9.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ, ನೀರಾವರಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗಳಲ್ಲಿ ಮಾಸಿಕ ದರದ ಸಿಬ್ಬಂದಿಯಾಗಿ ಕಾರ್ಯನಿರ್ವಹಿಸುತ್ತಿರುವ ಒಟ್ಟು 39 (ಮೂವತ್ತೊಂಬತ್ತು) ಪದವೀಧರ ಇಂಜಿನಿಯರುಗಳ ಹಾಗೂ ಡಿಪ್ಲೊಮಾ ಇಂಜಿನಿಯರುಗಳ ಮಾಸಿಕ ಸಂಚಿತ ವೇತನವನ್ನು ಪದವೀಧರ ಇಂಜಿನಿಯರುಗಳಿಗೆ ಮತ್ತು ಡಿಪ್ಲೊಮಾ ಇಂಜಿನಿಯರುಗಳಿಗೆ ನಿಗದಿಪಡಿಸಿರುವ ಪರಿಷ್ಕೃತ ವೇತನ ಶ್ರೇಣಿಗಳ ಕನಿಷ್ಠ ಮೂಲ ವೇತನ ಅಂದರೆ ಪದವೀಧರ ಇಂಜಿನಿಯರುಗಳಿಗೆ ರೂ. 11400/– ಮತ್ತು ಡಿಪ್ಲೊಮಾ ಇಂಜಿನಿಯರುಗಳಿಗೆ ರೂ. 8825/–ನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: ಆಇ 1159 ಸೇ–1/2010 ದಿನಾಂಕ: 9.9.2010 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಮಾರ್ಕಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು–2)

ಪಿ.ಆರ್. 2562

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಹಾಲೇಖಪಾಲರು ಸಲ್ಲಿಸಿರುವ ತಪಾಸಣಾ ವರದಿಗಳು / ಆಡಿಟ್ ಆಕ್ಷೇಪಣೆಗಳನ್ನು ಪರಿಶೀಲಿಸುವ ಸಲುವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು)ಯ ಮಟ್ಟದಲ್ಲಿ Adhoc ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ: FD(SPL)686 Pen 67, ದಿನಾಂಕ: 30.03.1968.

**ಪ್ರಸ್ತಾವನೆ :**

ಮೇಲೆ ಓದಲಾದ ಅಧಿಕೃತ ಜ್ಞಾಪನದಲ್ಲಿ ಸರ್ಕಾರದ ವಿವಿಧ ಇಲಾಖೆಗಳ ಅಧೀನದಲ್ಲಿ ಬರುವ ಇಲಾಖೆಗಳು / ನಿಗಮ / ಮಂಡಳಿಗಳು / ಸ್ವಾಯತ್ತ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಮಹಾಲೇಖಪಾಲರಿಂದ ಸ್ವೀಕರಿಸಲಾಗುವ ಆಡಿಟ್ ಆಕ್ಷೇಪಣೆಗಳು Outstanding Inspection Reports ಮುಂತಾದವುಗಳನ್ನು ತುರ್ತಾಗಿ ಪರಿಶೀಲಿಸಿ, ಅವುಗಳನ್ನು ವಿಲೇಗೊಳಿಸುವ ಸಲುವಾಗಿ ಸಚಿವಾಲಯದ ಆಡಳಿತ ಇಲಾಖೆಯ ಮಟ್ಟದಲ್ಲಿ Adhoc ಸಮಿತಿಯನ್ನು ರಚಿಸಲು ಸೂಚಿಸಲಾಗಿದೆ.

ಅದರಂತೆಯೇ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಯ ಅಧೀನದಲ್ಲಿ ಬರುವ ಎಲ್ಲಾ ಶಾಖೆಗಳು / ಆಡಳಿತ ತರಬೇತಿ ಸಂಸ್ಥೆ, ಮೈಸೂರು / ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ, ಬೆಂಗಳೂರು ಇವರಿಗೆ ಸಂಬಂಧಿಸಿದಂತೆ ಮಹಾಲೇಖಪಾಲರು, ಬೆಂಗಳೂರು ಇವರಿಂದ ಸ್ವೀಕರಿಸಲಾದ ಆಡಿಟ್ ಆಕ್ಷೇಪಣೆಗಳು/ Outstanding Inspection Reports ಮುಂತಾದವುಗಳನ್ನು ಪರಿಶೀಲಿಸುವ ಸಲುವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಯ ಮಟ್ಟದಲ್ಲಿ Adhoc ಸಮಿತಿಯನ್ನು ರಚಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಸಂಬಂಧ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 155 ಇಆತ 2010, ಬೆಂಗಳೂರು, ದಿನಾಂಕ : 1ನೇ ಅಕ್ಟೋಬರ್, 2010.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳ ಹಿನ್ನೆಲೆಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಹಾಗೂ ಸದರಿ ಇಲಾಖೆಯ ಅಧೀನದಲ್ಲಿ ಬರುವ ಎಲ್ಲಾ ಶಾಖೆಗಳು / ಆಡಳಿತ ತರಬೇತಿ ಸಂಸ್ಥೆ, ಮೈಸೂರು / ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ, ಬೆಂಗಳೂರು ಈ ಇಲಾಖೆಗಳಿಗೆ ಸಂಬಂಧಿಸಿದಂತೆ ಮಹಾಲೇಖಪಾಲರಿಂದ ಸ್ವೀಕರಿಸಲಾಗುವ ಆಡಿಟ್ ಆಕ್ಷೇಪಣೆಗಳು/ Outstanding Inspection Reports ಗಳನ್ನು ಪರಿಶೀಲಿಸಿ ಇತ್ಯರ್ಥಗೊಳಿಸುವ ಸಲುವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಯ ಮಟ್ಟದಲ್ಲಿ ಕೆಳಕಂಡ ಸದಸ್ಯರುಗಳನ್ನೊಳಗೊಂಡ Adhoc ಸಮಿತಿಯನ್ನು ಮೂಲಕ ರಚಿಸಲಾಗಿದೆ.

1. ಸರ್ಕಾರದ ಪ್ರಧಾನ ಕಾರ್ಯದರ್ಶಿ,
   ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) – ಅಧ್ಯಕ್ಷರು
2. ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು – ಸದಸ್ಯರು
3. ನಿರ್ದೇಶಕರು, ಕರ್ನಾಟಕ ಸರ್ಕಾರ ಸಚಿವಾಲಯ ತರಬೇತಿ ಸಂಸ್ಥೆ
   ಬೆಂಗಳೂರು – ಸದಸ್ಯರು
4. ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ)
   ಆರ್ಥಿಕ ಇಲಾಖೆ – ಸದಸ್ಯರು
5. ಪ್ರಧಾನ ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು
   (ಇವರು ಅಥವಾ ಇವರ ಪ್ರತಿನಿಧಿಗಳು) – ಸದಸ್ಯರು
6. ಸರ್ಕಾರದ ಉಪ ಕಾರ್ಯದರ್ಶಿ,
   ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) – ಸದಸ್ಯರು ಮತ್ತು Convenor

ಈ Adhoc ಸಮಿತಿಯ ಕಾರ್ಯನಿರ್ವಹಣೆಗಳು/ಷರತ್ತು ಮತ್ತು ನಿಬಂಧನೆಗಳನ್ನು ಆರ್ಥಿಕ ಇಲಾಖೆಯ ವತಿಯಿಂದ ಹೊರಡಿಸಲಾಗಿರುವ Hand book ರಲ್ಲಿ ನಮೂದಿಸಿರುವ ಪ್ರಕಾರ ಇರತಕ್ಕದ್ದು. ಈ ಸಮಿತಿಯು ಒಂದು ವರ್ಷದಲ್ಲಿನ ಪ್ರತಿ ತ್ರೈಮಾಸಿಕ ಅವಧಿಯಲ್ಲಿ ಅಥವಾ ಸಮಿತಿಯ ಅಧ್ಯಕ್ಷರು ನಿರ್ಣಯಿಸಿದಂತೆ ಸದರಿ ಸಮಿತಿಯು ಸಭೆ ಸೇರಿ ಇಲಾಖೆಯಲ್ಲಿ ಬಾಕಿ ಇರುವ ಪ್ರಮುಖ ತಪಾಸಣಾ ವರದಿಗಳು ಹಾಗೂ ಆಡಿಟ್ ಆಕ್ಷೇಪಣೆಗಳನ್ನು ಪರಿಶೀಲಿಸಲು ಕ್ರಮ ಜರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ವಿ. ಜಯಲಕ್ಷ್ಮಿ**
ಸರ್ಕಾರದ ಉಪ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ).

ಪಿ.ಆರ್. 2563

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎನ್. ನಾರಾಯಣಸ್ವಾಮಿ, ಪಿ.ಐ. (ಹಾಲಿ ಎ.ಸಿ.ಪಿ.) ವಿಧಾನ ಸೌಧ, ಭದ್ರತೆ ವಿಭಾಗ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿ.ಎ.ಆರ್., ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 24/ಡಿಇ/ಆರ್–6/2003 ದಿ: 24–6–2003
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)39/2003–04 ದಿನಾಂಕ: 25–11–2005
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 16–02–06
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)39/2003–04 ದಿನಾಂಕ: 13–8–2010

**ಪ್ರಸ್ತಾವನೆ :**

ಶ್ರೀ ಎನ್. ನಾರಾಯಣಸ್ವಾಮಿ, ಇವರು ಜಾಲಹಳ್ಳಿ, ಪೊಲೀಸ್ ಠಾಣೆ, ಬೆಂಗಳೂರಿನಲ್ಲಿ ಪಿ.ಐ., ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗಗೊಳಿಸಿಕೊಂಡ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ :**

"ನೀವು ಜಾಲಹಳ್ಳಿ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಸೇವೆ ಸಲ್ಲಿಸುತ್ತಿದ್ದು, ದಿನಾಂಕ: 12-11-2001 ರಂದು ನಿಮ್ಮ ಠಾಣೆಯ ಪಿ.ಎಸ್.ಐ., ಶ್ರೀ ಆರ್.ಜಿ. ನಾಗರಾಜಯ್ಯ, ರವರು ಕರ್ತವ್ಯಕ್ಕೆ ಠಾಣೆಗೆ ಬಂದು ನಂತರ ಯಶವಂತಪುರ ಕಾರ್ಪೊರೇಷನ್ ಸ್ಕೂಲಿನ ಮತಗಟ್ಟೆ ಹತ್ತಿರ ಮತ ಎಣಿಕೆ ಬಂದೋಬಸ್ತ್ ಕರ್ತವ್ಯಕ್ಕೆ ನಿಮ್ಮ ಬಳಿ ವರದಿ ಮಾಡಿದ್ದು, ನೀವು ಪಿ.ಎಸ್.ಐ. ರವರನ್ನು ಪ್ಲಟೂನ್ ನೋಡಿಕೊಂಡು, ಪ್ಲಟೋನ್‌ನಲ್ಲಿಯೇ ಇದ್ದು, ನಂತರ ಮಧ್ಯಾಹ 12.10ರ ಸಮಯದಲ್ಲಿ ನಿಯಂತ್ರಣ ಕೋಣೆಯಿಂದ ಪಿ.ಎಸ್.ಐ., ರವರಿಗೆ ಪ್ಲಟೋನ್‌ನೊಂದಿಗೆ ನಿಮ್ಮ ಠಾಣೆಯ ಹತ್ತಿರ ಬರುವಂತೆ ತಿಳಿಸಿದ ಮೇರೆಗೆ, ಸದರಿ ಪಿ.ಎಸ್.ಐ., ರವರು ನಿಮ್ಮ ಬಳಿ ಬಂದು ವರದಿ ಮಾಡಿದಾಗ, ನೀವು ಸದರಿ ಪಿ.ಎಸ್.ಐ., ರವರನ್ನು ಏಕವಚನದಿಂದ "ಬೋಳಿ ಮಗನೇ ನೀನು ಹೊಟ್ಟೆಗೆ ಅನ್ನ ತಿನ್ನತ್ತೀಯಾ, ಹೇಲು ತಿನ್ನುತ್ತೀಯಾ" ಎಂದು ನಿನ್ನ ಹಲ್ಲುಗಳನ್ನು ಉದುರಿಸುತ್ತೇನೆಂದು ಸಿಬ್ಬಂದಿ ಮುಂದೆ ಬೈಯ್ದು ಹೊಡೆಯಲು ಹೋಗಿರುತ್ತೀರಿ" ಈ ಬಗ್ಗೆ ಸಹಾಯಕ ಪೊಲೀಸ್ ಕಮೀಷನರ್, ಯಶವಂತಪುರ ಉಪ ವಿಭಾಗ ರವರು ಪೂರ್ವಭಾವೀ ವಿಚಾರಣೆ ನಡೆಸಿ ನಿಮ್ಮ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬಿತಾಗಿರುತ್ತದೆ. ಎಂದು ತಿಳಿಸಿರುತ್ತಾರೆ.

ನೀವು ಠಾಣೆಯ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ನಿಮ್ಮ ಕೆಳಗಿನ ಅಧಿಕಾರಿ ಮತ್ತು ಸಿಬ್ಬಂದಿಗಳನ್ನು ಅನಾವಶ್ಯಕವಾಗಿ ಅವಾಚ್ಯ ಶಬ್ದಗಳಿಂದ ಬೈಯ್ದು, ಅಲ್ಲದೇ ಅಸಭ್ಯ ರೀತಿಯಲ್ಲಿ ವರ್ತಿಸಿ ಠಾಣೆಯಲ್ಲಿ ಅಹಿತಕರ ವಾತಾವರಣವನ್ನು ಉಂಟು ಮಾಡಿರುತ್ತೀರಿ. ಅಲ್ಲದೇ ಕೆಳಗಿನ ಸಿಬ್ಬಂದಿಯೊಂದಿಗೆ ಉತ್ತಮ ಭಾಂದವ್ಯ ಬೆಳೆಸಿಕೊಳ್ಳದೇ ಅವರುಗಳನ್ನು ಅವಾಚ್ಯ ಶಬ್ದಗಳಿಂದ ನಿಂದಿಸಿ, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗವನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, ಆಡಳಿತ ಮತ್ತು ಸಿ.ಎ.ಆರ್., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿ: 24-6-2003ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನಗಳಿಗೆ ದಕ್ಕೆಯಾಗುವಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 25-11-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 218 ಪೊಸಿಅ 2009 ಬೆಂಗಳೂರು, ದಿನಾಂಕ : 01-10-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್. ನಾರಾಯಣಸ್ವಾಮಿ, ಪಿ.ಐ. (ಹಾಲಿ ಎ.ಸಿ.ಪಿ.) ವಿಧಾನ ಸೌಧ, ಭದ್ರತೆ ವಿಭಾಗ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2564

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ.ಸಿ. ಗಂಗರಾಜು, ಮಾಜಿ ಎ.ಪಿ.ಸಿ. ಸಿ.ಎ.ಆರ್. (ಉತ್ತರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು ಸಿ.ಎ.ಆರ್., ಬೆಂಗಳೂರು, ಇವರು ಆದೇಶ ಸಂಖ್ಯೆ: ಡಿಇ 08/2006-07 ಓ.ಬಿ./48/2007-08 ದಿನಾಂಕ: 29-5-2007
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಸಿ.ಎ.ಆರ್. ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 12/ಅಪೀಲು 2/2009 ದಿನಾಂಕ:15-10-09
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 18-11-09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)62/2009-10 ದಿನಾಂಕ: 18-8-2010

**ಪ್ರಸ್ತಾವನೆ :**

ಶ್ರೀ ಕೆ.ಸಿ. ಗಂಗರಾಜು ಇವರು ನಗರ ಸಶಸ್ತ್ರ ಪಡೆ (ಉತ್ತರ) ಬೆಂಗಳೂರು, ಇಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ

ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ :**

1. ಶ್ರೀ ಕೆ.ಸಿ. ಗಂಗರಾಜು, ಪೇದೆ 2916 "ಬಿ" ವಿಭಾಗ, ಸಿ.ಎ.ಆರ್. ಉತ್ತರ ಬೆಂಗಳೂರು ಆದ ನೀವು ದಿನಾಂಕ: 07–02–2006 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿಯಾಗಿ, ಗೈರುಹಾಜರಿಯಲ್ಲೆ ಮುಂದುವರೆದಿರುತ್ತೀರಿ. ನೀವು ಕಛೇರಿಗೆ ಬಂದು ಯಾವುದೆ ಪೂರ್ವಾನುಮತಿಯನ್ನು ಪಡೆಯದೆ ಅಥವಾ ರಜೆಯನ್ನು ಪಡೆಯದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿಯಾಗಿ ಗೈರುಹಾಜರಿಯಲ್ಲೇ ಮುಂದುವರೆದಿರುತ್ತೀರಿ. ಇದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನಿಮ್ಮ ಕರ್ತವ್ಯ ನಿರ್ಲಕ್ಷತೆಯನ್ನು ಎತ್ತಿ ತೋರಿಸುತ್ತದೆ.

2. ನಿಮಗೆ ಕರ್ತವ್ಯಕ್ಕೆ ಬರುವಂತೆ ತಿಳಿಸಿ ಕಛೇರಿಯಿಂದ ಜ್ಞಾಪನಗಳನ್ನು ಹೊರಡಿಸಿದ್ದು, ಅವುಗಳನ್ನು ಸಹಿ ಮಾಡಿ ಸ್ವೀಕರಿಸಿರುತ್ತೀರಿ. ನೀವು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿಯಾಗಿ, ಗೈರುಹಾಜರಿಯಲ್ಲಿ ಮುಂದುವರೆಯುತ್ತಿರುವ ವಿಷಯವನ್ನು ನೀವು ಈ ಜ್ಞಾಪನಗಳ ಮೂಲಕ ಸ್ಪಷ್ಟವಾಗಿ ತಿಳಿದುಕೊಂಡಿರುತ್ತೀರಿ. ಆದರೂ ಕೂಡ ಬೇಜವಾಬ್ದಾರಿತನದಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿಯಾಗಿ, ಗೈರುಹಾಜರಿಯಲ್ಲೆ ಮುಂದುವರೆದಿರುತ್ತೀರಿ. ಇದು ನಿಮ್ಮ ನಿರ್ಲಕ್ಷತೆ ಬೇಜವಾಬ್ದಾರಿತನ, ಕರ್ತವ್ಯ ಲೋಪವನ್ನು ಎತ್ತಿ ತೋರಿಸುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರು, ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು ಸಿ.ಎ.ಆರ್., (ಉತ್ತರ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 29–5–2007ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ತೆಗೆದುಹಾಕಲಾಗಿದೆ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 07–02–2006 ರಿಂದ ಈ ಆದೇಶ ಹೊರಡಿಸಿದ ದಿನಾಂಕದವರೆಗಿನ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಸಿ.ಎ.ಆರ್. ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 15–10–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಕಾರಣಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 204 ಪೊಸಿಅ 2009 ಬೆಂಗಳೂರು, ದಿನಾಂಕ : 01–10–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಸಿ. ಗಂಗರಾಜು, ಮಾಜಿ ಪಿ.ಸಿ., ನಗರ ಸಶಸ್ತ್ರ ಪಡೆ (ಉತ್ತರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2565

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ. ಮಾದೇಗೌಡ, ಪಿ.ಎಸ್.ಐ., ಬೆಸ್ಕಾಂ, ರಾಮನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ/24/05–06 ಓ.ಬಿ./ಸಿವಿಲ್/262/06–07 ದಿನಾಂಕ: 21–3–2007
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/66/2009–10 ಓ.ಬಿ: 60/2009–10 ದಿನಾಂಕ: 20–3–10
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 04–6–10
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)24/2010–11 ದಿನಾಂಕ: 05–8–2010

**ಪ್ರಸ್ತಾವನೆ :**

ಶ್ರೀ ಬಿ. ಮಾದೇಗೌಡ, ಪಿ.ಎಸ್.ಐ., ಬೆಸ್ಕಾಂ, ರಾಮನಗರ ಜಿಲ್ಲೆ, ಇವರು ಬೀಚನಹಳ್ಳಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪ, ಬೇಜವಾಬ್ದಾರಿತನ, ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ

ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ :**

1. "ಇವರು ಬೀಚನಹಳ್ಳಿ ಠಾಣಾ ಮೊ.ಸಂ: 110/05 ಕಲಂ 34 ಎಕ್ಸೈಜ್ ಆಕ್ಟ್ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡಿದ್ದ ಅಂಬಾಸಿಡರ್ ಕಾರ್ ಸಿಎಬಿ–4000ನ್ನು ಯಾವುದೇ ಆದೇಶವಿಲ್ಲದೇ ಬಿಟ್ಟುಕಳುಹಿಸುವುದರ ಮೂಲಕ ಕರ್ತವ್ಯ ಲೋಪವೆಸಗಿರುವ ಬಗ್ಗೆ.
2. ಈ ಪ್ರಕರಣದಲ್ಲಿ ಅಂಬಾಸಿಡರ್ ಕಾರ್ ಸಿಎಬಿ–4000ರ ಕಾರ್ ಚಾಲಕ ರಂಗಸ್ವಾಮಿ ರವರನ್ನು ದಸ್ತಗಿರಿ ಮಾಡಿ ಕ್ರಮ ಜರುಗಿಸದೇ ಆರೋಪಿಯನ್ನು ಬಿಟ್ಟು ಕಳುಹಿಸಿರುವ ಕರ್ತವ್ಯ ಲೋಪದ ಬಗ್ಗೆ.
3. ಪ್ರಕರಣಕ್ಕೆ ಸಂಬಂಧಿಸಿದ ಅಂಬಾಸಿಡರ್ ಕಾರ್ ಮತ್ತು ಆರೋಪಿ ಚಾಲಕ ರಂಗಸ್ವಾಮಿಯನ್ನು ದಸ್ತಗಿರಿ ಮಾಡಿರುವುದಾಗಿ ಮೇಲಾಧಿಕಾರಿಗಳಿಗೆ ಸುಳ್ಳು ಮಾಹಿತಿ ನೀಡಿ ಈ ಪ್ರಕರಣದಲ್ಲಿ ತೀವ್ರತರವಾದ ಬೇಜವಾಬ್ದಾರಿ ನಿರ್ಲಕ್ಷ್ಯತೆ ಅಶಿಸ್ತು ಪ್ರದರ್ಶಿಸಿರುವ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರು, ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 21–3–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಮೂರು ವರ್ಷಗಳ ಕಾಲ ತಡೆಹಿಡಿಯುವ ದಂಡನೆ ವಿಧಿಸಿರುತ್ತಾರೆ. ದಿನಾಂಕ: 25–12–2005 ರಿಂದ 17–02–06ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 20–3–10ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 91 ಪೊಸಿಅ 2010 ಬೆಂಗಳೂರು, ದಿನಾಂಕ : 27–9–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ಮಾದೇಗೌಡ, ಪಿ.ಎಸ್.ಐ., ಬೆಸ್ಕಾಂ, ರಾಮನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2566

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಲೋಕೇಶ್ ಜಿ. ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಶಿರೋಳ ನರಗುಂದ ತಾಲ್ಲೂಕು, ಗದಗ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್ಓ(3)/142/2009–10 ದಿನಾಂಕ: 21/04/2010

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ಲೋಕೇಶ್, ಜಿ. ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಶಿರೋಳ, ನರಗುಂದ ತಾಲ್ಲೂಕು, ಗದಗ ಜಿಲ್ಲೆ ಇವರು ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 739 ಹೆಚ್ಎಸ್ಹೆಚ್ 2008 ದಿನಾಂಕ: 09/01/2009 ರ ಪ್ರಕಾರ ದಿನಾಂಕ: 06/02/2009 ರಂದು ಸೇವೆಗೆ ಸೇರಿದ್ದು, ವೈಯಕ್ತಿಕ ಕಾರಣಗಳಿಂದ ದಿನಾಂಕ: 01/11/2009 ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿ, ಅಂಗೀಕರಿಸುವಂತೆ ಕೋರಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವೆಂದು ಹಾಗೂ ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ: 01/11/2009 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 249 ಹೆಚ್‌ಎಸ್‌ಹೆಚ್ 2010 ಬೆಂಗಳೂರು, ದಿನಾಂಕ: 16-09-2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ: ಲೋಕೇಶ್ ಜಿ. ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಶಿರೋಳ, ನರಗುಂದ ತಾಲ್ಲೂಕು, ಗದಗ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 01/11/2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು-1)

ಪಿ.ಆರ್. 2567

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2010-11ನೇ ಸಾಲಿನಲ್ಲಿ ಪ್ರಥಮ ಎಂಬಿಬಿಎಸ್/ಬಿಡಿಎಸ್ ಕೋರ್ಸಿಗೆ ಸಿ.ಇ.ಟಿ.ಯಿಂದ ಆಯ್ಕೆಯಾದ ವಿದ್ಯಾರ್ಥಿಗಳ ಪರಸ್ಪರ ವರ್ಗಾವಣೆ ಮಾಡಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ: ಎಂಸಿಎಸ್/5/2010-11, ದಿನಾಂಕ: 06.09.2010 ಮತ್ತು ದಿನಾಂಕ: 8.9.2010

**ಪ್ರಸ್ತಾವನೆ :**

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ ಓದಲಾದ ತಮ್ಮ ಪತ್ರಗಳಲ್ಲಿ 2010-11ನೇ ಸಾಲಿನಲ್ಲಿ ಪ್ರಥಮ ಎಂಬಿಬಿಎಸ್/ಬಿಡಿಎಸ್ ಕೋರ್ಸಿಗೆ ಸಿ.ಇ.ಟಿ.ಯಿಂದ ಆಯ್ಕೆಯಾದ ವಿದ್ಯಾರ್ಥಿಗಳು ಒಂದು ಕಾಲೇಜಿನಿಂದ ಮತ್ತೊಂದು ಕಾಲೇಜಿಗೆ ಪರಸ್ಪರ ವರ್ಗಾವಣೆ ಮಾಡಿಕೊಳ್ಳಲು ಸುಮಾರು 27 ಅರ್ಜಿಗಳ ಪಟ್ಟಿಯೊಂದಿಗೆ ಸಲ್ಲಿಸುತ್ತಾ ಸರ್ಕಾರದ ಅನುಮತಿಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿ ನಂತರ, 2010-11ನೇ ಸಾಲಿನಲ್ಲಿ ಪ್ರಥಮ ಎಂಬಿಬಿಎಸ್/ಬಿಡಿಎಸ್ ಕೋರ್ಸಿಗೆ ಸಿ.ಇ.ಟಿಯಿಂದ ಆಯ್ಕೆಯಾದ ವಿದ್ಯಾರ್ಥಿಗಳು ಒಂದು ಕಾಲೇಜಿನಿಂದ ಮತ್ತೊಂದು ಕಾಲೇಜಿಗೆ ಪರಸ್ಪರ ವರ್ಗಾವಣೆ ಪಡೆಯಲು ಅನುಮತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 439 ಎಂಪಿಎಸ್ 2010, ಬೆಂಗಳೂರು, ದಿನಾಂಕ : 22.09.2010**

2010-11ನೇ ಶೈಕ್ಷಣಿಕ ವರ್ಷದಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷೆ ಮೂಲಕ ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಮತ್ತು ದಂತ ಕಾಲೇಜುಗಳಲ್ಲಿ ಪ್ರಥಮ ಎಂಬಿಬಿಎಸ್ ಮತ್ತು ಬಿಡಿಎಸ್ ಕೋರ್ಸಿಗೆ ಅನುಕ್ರಮವಾಗಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳು ಒಂದು ವೈದ್ಯಕೀಯ/ದಂತ ಕಾಲೇಜಿನಿಂದ ಮತ್ತೊಂದು ವೈದ್ಯಕೀಯ/ದಂತ ಕಾಲೇಜಿಗೆ ಪರಸ್ಪರ ವರ್ಗಾವಣೆ ಪಡೆಯಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಅನುಮತಿಯನ್ನು ನೀಡಲಾಗಿದೆ.

**ಷರತ್ತು ಮತ್ತು ನಿಬಂಧನೆಗಳು :**

1. ಒಂದು ಸರ್ಕಾರಿ ವೈದ್ಯಕೀಯ/ದಂತ ಕಾಲೇಜಿನಿಂದ ಮತ್ತೊಂದು ಸರ್ಕಾರಿ ವೈದ್ಯಕೀಯ/ದಂತ ಕಾಲೇಜಿಗೆ ಮಾತ್ರ.
2. ಒಂದು ಖಾಸಗಿ ವೈದ್ಯಕೀಯ/ದಂತ ಕಾಲೇಜಿನಿಂದ ಮತ್ತೊಂದು ಖಾಸಗಿ ವೈದ್ಯಕೀಯ/ದಂತ ಕಾಲೇಜಿಗೆ ಮಾತ್ರ.
3. ಪರಸ್ಪರ ವರ್ಗಾವಣೆ ಪಡೆದ ವೈದ್ಯಕೀಯ/ದಂತ ವಿದ್ಯಾರ್ಥಿಗಳು 2010-11ನೇ ಸಾಲಿನಲ್ಲಿ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಮುಂದಿನ ಕೌನ್ಸಿಲಿಂಗ್‌ಗೆ ಹಾಜರಾಗಲು ಅರ್ಹರಿರುವುದಿಲ್ಲ.
4. ಭಾರತೀಯ ವೈದ್ಯಕೀಯ ಪರಿಷತ್ತು (ಎಂಸಿಐ) ಹಾಗೂ ಭಾರತೀಯ ದಂತ ವೈದ್ಯಕೀಯ ಪರಿಷತ್ತು (ಡಿಸಿಐ) ಇವರು ಪರಿಸ್ಪರ ವರ್ಗಾವಣೆ ಬಗ್ಗೆ ನಿಯಮಾವಳಿಗಳನ್ನು ತೀವ್ರಗೊಳಿಸಿರುವ ಹಿನ್ನೆಲೆಯಲ್ಲಿ ಸದರಿ ಪರಸ್ಪರ ವರ್ಗಾವಣೆಗಳನ್ನು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಪರಿಶೀಲಿಸಿ, ಅನುಮತಿ ನೀಡತಕ್ಕದ್ದು.
5. ಒಮ್ಮೆ ಪರಸ್ಪರ ವರ್ಗಾವಣೆ ಪಡೆದ ವಿದ್ಯಾರ್ಥಿಗಳು ಯಾವುದೇ ಕಾರಣಕ್ಕೂ ಮತ್ತೊಮ್ಮೆ ಪರಸ್ಪರ ವರ್ಗಾವಣೆಗಾಗಲಿ ಅಥವಾ ಯಾವುದೇ ಸ್ವರೂಪದ ವರ್ಗಾವಣೆಗಾಗಲಿ ಅರ್ಹರಿರುವುದಿಲ್ಲ.
6. ಪರಸ್ಪರ ವರ್ಗಾವಣೆಯನ್ನು ಪಡೆಯುವ ಪ್ರತಿಯೊಬ್ಬ ವಿದ್ಯಾರ್ಥಿಯು ತನ್ನ ಸ್ವಂತ ಜವಾಬ್ದಾರಿಯ ಮೇಲೆ (At their own risk) ಒಂದು ವೈದ್ಯಕೀಯ/ದಂತ ಕಾಲೇಜಿನಿಂದ ಮತ್ತೊಂದು ವೈದ್ಯಕೀಯ/ದಂತ ಕಾಲೇಜಿಗೆ ದಿನಾಂಕ: 28.09.2010ಕ್ಕೆ ಮೊದಲು ಪುನರ್ ಪ್ರವೇಶಾತಿ ಪಡೆಯತಕ್ಕದ್ದು. ಇದಕ್ಕೆ ಪೂರಕವಾಗಿ ಪ್ರತಿಯೊಬ್ಬ ವಿದ್ಯಾರ್ಥಿಯು ಎರಡು ಸಾಕ್ಷಿಗಳ ಸಮೇತ ಮುಚ್ಚಳಿಕೆಯನ್ನು ಸಲ್ಲಿಸತಕ್ಕದ್ದು.
7. ಪರಸ್ಪರ ವರ್ಗಾವಣೆ ಬಯಸುವ ಪ್ರತಿಯೊಬ್ಬ ವಿದ್ಯಾರ್ಥಿಯು ಹಾಲಿ ವ್ಯಾಸಂಗ ಮಾಡುತ್ತಿರುವ ಕಾಲೇಜಿನ ಪ್ರಾಂಶುಪಾಲರಿಂದ ಹಾಗೂ ಕಾಲೇಜಿಗೆ ವರ್ಗಾವಣೆ ಬಯಸಿದ್ದಾರೋ ಆ ಕಾಲೇಜಿನ ಪ್ರಾಂಶುಪಾಲರಿಂದ ನಿರಾಕ್ಷೇಪಣಾ ಪತ್ರವನ್ನು ಲಿಖಿತವಾಗಿ ಪಡೆಯಬೇಕು. ಕಾಲೇಜಿನ ಪ್ರವೇಶದಲ್ಲಿ ಯಾವುದೇ ಅಡಚಣೆಯಾದಲ್ಲಿ ಅದಕ್ಕೆ ವಿದ್ಯಾರ್ಥಿಗಳೇ ವೈಯಕ್ತಿಕವಾಗಿ ವಿದ್ಯಾರ್ಥಿಗಳೇ ಜವಾಬ್ದಾರರಾಗಿರುತ್ತಾರೆ.
8. ಪರಸ್ಪರ ವರ್ಗಾವಣೆ ಬಯಸುವ ವಿದ್ಯಾರ್ಥಿಗಳ ವರ್ಗಾವಣೆಯನ್ನು ದಿನಾಂಕ: 28.09.2010ಕ್ಕೆ ಮೊದಲು ಅಂತಿಮಗೊಳಿಸಬೇಕು ಮತ್ತು ದಿನಾಂಕ: 28.09.2010ರ ಒಳಗಾಗಿ ವರ್ಗಾವಣೆಗೊಂಡ ವಿದ್ಯಾರ್ಥಿಗಳು ಸಂಬಂಧಿಸಿದ ಕಾಲೇಜಿಗೆ ಸೇರತಕ್ಕದ್ದು. ಯಾವುದೇ ಕಾರಣಕ್ಕೆ ಪರಸ್ಪರ ವರ್ಗಾವಣೆ ಕಾಲಮಿತಿಯನ್ನು ವಿಸ್ತರಿಸಲಾಗುವುದಿಲ್ಲ.

9. ಪರಸ್ಪರ ವರ್ಗಾವಣೆಗೆ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ತಲಾ ರೂ. 1,000.00 (ರೂಪಾಯಿ ಒಂದು ಸಾವಿರ ಮಾತ್ರ)ಗಳನ್ನು ವರ್ಗಾವಣಾ ಶುಲ್ಕವಾಗಿ ಪಡೆದು ಸರ್ಕಾರದ ನಿಧಿಗೆ ಜಮಾ ಮಾಡತಕ್ಕದ್ದು.

10. ಪರಸ್ಪರ ವರ್ಗಾವಣೆ ಪ್ರಕ್ರಿಯೆಗೆ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಪ್ರಾಧಿಕಾರಿಯಾಗಿರುತ್ತಾರೆ ಹಾಗೂ ಪರಸ್ಪರ ವರ್ಗಾವಣೆ ಸಂಬಂಧ ಉಂಟಾಗಬಹುದಾದ ಯಾವುದೇ ಅಡಚಣೆಗಳಿಗೆ ವಿದ್ಯಾರ್ಥಿಗಳು ನೇರವಾಗಿ ವೈದ್ಯಕೀಯ ಶಿಕ್ಷಣ ನಿರ್ದೇಶಕರನ್ನು ಸಂಪರ್ಕಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಬಿ. ಧನಂಜಯಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

ಪಿ.ಆರ್. 2568

## ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ-IIರಲ್ಲಿ ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ನೆರವಿನೊಂದಿಗೆ ಕೈಗೊಳ್ಳುವ ಕಾರ್ಯ ಯೋಜನೆಗೆ ಸಚಿವ ಸಂಪುಟದ ಅನುಮೋದನೆ.

**ಓದಲಾಗಿದೆ :** ಕೆಶಿಫ್‌ನ ಪ್ರಸ್ತಾವನೆ ಸಂಖ್ಯೆ: PIU/KSHIP:AE-5:2010-11. Dated: 02-07-2010.

**ಪ್ರಸ್ತಾವನೆ :**

1. ಕೆಷಿಪ್–1 ಯೋಜನೆಯ ಯಶಸ್ಸಿನಿಂದ ಉತ್ತೇಜಿತವಾಗಿ, ರಾಜ್ಯ ಸರ್ಕಾರವು ರಾಜ್ಯದ ಪ್ರಮುಖ ರಸ್ತೆ ಜಾಲದ ಇನ್ನಷ್ಟು ರಾಜ್ಯ ಹೆದ್ದಾರಿಗಳ ಅಭಿವೃದ್ಧಿಯನ್ನು ಕೆಷಿಪ್–2 ಅಡಿಯಲ್ಲಿ ಕೈಗೊಳ್ಳಲು ದಿನಾಂಕ: 29.09.2005 ಮತ್ತು 10.11.2006 ರಲ್ಲಿ ನಡೆದ ಸಂಪುಟ ಸಭೆಯಲ್ಲಿ ನಿರ್ಧರಿಸಿದ್ದು 3411 ಕಿ.ಮಿ.ಗಳ ರಾಜ್ಯ ಹೆದ್ದಾರಿಗಳನ್ನು ಅಭಿವೃದ್ಧಿಪಡಿಸಲು ಸರ್ಕಾರದ ಆದೇಶ ಸಂಖ್ಯೆ:ಲೋಇ61: ಇಎಪಿ: 2006 ದಿನಾಂಕ: 25.11.2006 ರಲ್ಲಿ ಅನುಮೋದನೆ ನೀಡಿರುತ್ತದೆ. ಕೆಷಿಪ್–2 ರಲ್ಲಿ ಅಭಿವೃದ್ಧಿಗಾಗಿ ಆಯ್ಕೆ ಮಾಡಲಾಗಿರುವ ರಸ್ತೆಗಳ ಪಟ್ಟಿಯನ್ನು ಅನುಬಂಧ–1 ರಲ್ಲಿ ನೀಡಲಾಗಿದೆ.

2. ಬಾಹ್ಯ ನೆರವಿನಲ್ಲಿ ಕೈಗೊಳ್ಳಲಾಗಿರುವ ರಸ್ತೆ ಯೋಜನೆಗಳಿಗೆ ನಿರ್ದಿಷ್ಟ ಅಧ್ಯಯನಗಳನ್ನು ಕೈಗೊಳ್ಳುವುದು ಅವಶ್ಯಕವಿದ್ದು ಕೆಷಿಪ್–2 ಯೋಜನೆಯ ರಸ್ತೆಗಳ ಆಯ್ಕೆಯಲ್ಲಿ **ಸೂಕ್ತ ಆಯ್ಕೆ ಅಧ್ಯಯನ** (Strategic Option Study) ವಿಧಾನವನ್ನು ಅನುಸರಿಸಲಾಗಿದೆ.

3. ಸರ್ಕಾರದ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಲಾದ ವಿಮರ್ಶಕ ಸಮಿತಿಯು ಕಾರ್ಯಸಾಧ್ಯತಾ ಅಧ್ಯಯನಗಳ ಫಲಿತಾಂಶ ಹಾಗೂ ಶಿಫಾರಸ್ಸುಗಳನ್ನು ಪರಿಶೀಲಿಸಿ 4888 ಕಿ.ಮಿ.ಗಳ ಪೈಕಿ, 3411 ಕಿ.ಮಿ. ರಾಜ್ಯ ಹೆದ್ದಾರಿಗಳ ಅಭಿವೃದ್ಧಿಯನ್ನು ಕೆಷಿಪ್–2 ಯೋಜನೆಯಲ್ಲಿ ಕೈಗೊಳ್ಳಲು ಅಧ್ಯತೆ ಮೇರೆಗೆ ಪಟ್ಟಿ ಸಿದ್ದಪಡಿಸಿದೆ. ಇದರಲ್ಲಿ 3154 ಕಿ.ಮಿ. ರಸ್ತೆಗಳನ್ನು ಆರ್ಥಿಕ ಅಂಶಗಳ ಆಧಾರದಲ್ಲೂ ಹಾಗೂ 257 ಕಿ.ಮಿ. ರಸ್ತೆಗಳನ್ನು ಪ್ರಾತಿನಿಧ್ಯ ರಹಿತ ಜಿಲ್ಲೆಗಳ ಆಧಾರದಲ್ಲಿ ಆಯ್ಕೆ ಮಾಡಲಾಗಿರುತ್ತದೆ.

4. 3411 ಕಿ.ಮಿ.ಗಳ ರಸ್ತೆ ಅಭಿವೃದ್ಧಿಗೆ ಅಗತ್ಯವಿರುವ ವಿವರವಾದ ಯೋಜನಾ ವರದಿ (DPR) ಯನ್ನು ಸಿದ್ಧಪಡಿಸಲಾಗಿದ್ದು ಎಲ್ಲಾ ರಸ್ತೆಗಳನ್ನು ಕನಿಷ್ಠ ಎರಡು ಪಥದ ರಸ್ತೆಗೆ ಮೇಲ್ದರ್ಜೆಗೇರಿಸಲಾಗುವುದು. ಕೆಷಿಪ್–2 ಯೋಜನೆಗೆ ಆಗತ್ಯವಿರುವ ಭಾರಿ ಮೊತ್ತದ ಆರ್ಥಿಕ ಬೇಡಿಕೆಯ ಪೂರೈಕೆಗಾಗಿ ಸರ್ಕಾರವು ವಿವಿಧ ವಿಕಲ್ಪಗಳಾದ ವಿಶ್ವ ಬ್ಯಾಂಕ್ / ಏಷಿಯನ್ ಅಭಿವೃದ್ಧಿ ಬ್ಯಾಂಕ್‌ಗಳ ಬಾಹ್ಯ ನೆರವು, ದೇಶಿಯ ವಿತ್ತ ಸಂಸ್ಥೆಗಳಿಂದ ಸಾಲ ಮತ್ತು ಖಾಸಗಿ ಕ್ಷೇತ್ರದಿಂದ ಹಣ ಹೂಡಿಕೆ ಮುಂತಾದವುಗಳ ಸಾಧ್ಯತೆಯನ್ನು ಪರಿಶೀಲಿಸುತ್ತಿದೆ. ಈ ಹಿನ್ನೆಲೆಯಲ್ಲಿ 3411 ಕಿ.ಮಿ.ಗಳ ರಸ್ತೆ ಅಭಿವೃದ್ಧಿಯ ಅನುಷ್ಠಾನವನ್ನು ಆರ್ಥಿಕ ಸಂಪನ್ಮೂಲಗಳ ಲಭ್ಯತೆಗೆ ಅನುಸಾರವಾಗಿ ವಿವಿಧ ಘಟ್ಟಗಳಾಗಿ ಕೈಗೊಳ್ಳಲು ನಿರ್ಧರಿಸಲಾಗಿದೆ.

5. ಕೇಂದ್ರ ಸರ್ಕಾರದ ಆರ್ಥಿಕ ವ್ಯವಹಾರಗಳ ಇಲಾಖೆ (DEA) ಯ ಶಿಫಾರಸ್ಸಿನಂತೆ ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ಕೆಷಪ್–2 ಯೋಜನೆಗೆ 300 ಮಿಲಿಯನ್ ಯುಎಸ್ ಡಾಲರ್ ನೆರವನ್ನು ನೀಡಲು ಒಪ್ಪಿರುತ್ತದೆ. ಸಾಲದ ಇನ್ನಿತರ ರೂಪುರೇಷೆಗಳು, ಷರತ್ತುಗಳ ಬಗ್ಗೆ ಮುಂದೆ ಅಂತಿಮಗೊಳಿಸಲಾಗುವುದು.

6. ಸರ್ಕಾರದ ಆದೇಶ ಸಂಖ್ಯೆ. ಲೋಇ:219:ಇಎಪಿ:2007 ಬೆಂಗಳೂರು ದಿನಾಂಕ: 29.03.2008ರಲ್ಲಿ ಯೋಜನೆಯಲ್ಲಿ 863 ಕಿ.ಮೀ. ರಸ್ತೆಗಳನ್ನು ಕೆಷಿಪ್–2ರ ಎಡಿಬಿ ಬ್ಯಾಂಕ್ ನೆರವಿನ ಯೋಜನೆಯಲ್ಲಿ ಕೈಗೊಳ್ಳಲು ಅನುಮೋದನೆ ನೀಡಿರುತ್ತದೆ.

7. ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ಯೋಜನೆಯ ಸಿದ್ಧತೆಯ ಪರಿಶೀಲನೆಯ ನಂತರ, ಯೋಜನೆ ಸಿದ್ಧತೆಯ ಮುಂದುವರೆದ ಪ್ರಗತಿಯ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿರುತ್ತಾರೆ ಮತ್ತು ಎಡಿಬಿ ಮಂಡಳಿಯಲ್ಲಿ ಸಾಲ ಯೋಜನೆಯ ಪ್ರಸ್ತಾವನೆಯನ್ನು 2011ರ ಬದಲಾಗಿ 2010ರಲ್ಲಿಯೇ ನೆರವೇರಿಸುವ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

8. ಸರ್ಕಾರದ ಆದೇಶದಲ್ಲಿನ ರಸ್ತೆಗಳ ಪಟ್ಟಿಯು ಎಡಿಬಿ ಬ್ಯಾಂಕ್‌ದೊಂದಿಗೆ ನಡೆದ ಸಮಾಲೋಚನೆಯ ಸೂಚನೆ ಮೇರೆಗೆ ಮಾರ್ಪಾಟು ಆಗಿರುತ್ತದೆ ಮತ್ತು ಎಡಿಬಿ ಬ್ಯಾಂಕ್‌ನ ಹಣಕಾಸು ನೆರವಿನಡಿಯಲ್ಲಿ ಆಯ್ದ 633 ಕಿ.ಮೀ. ರಸ್ತೆಗಳನ್ನು ಅಭಿವೃದ್ಧಿಗೊಳಿಸಲು ಸಾಂಪ್ರದಾಯಿಕ ಗುತ್ತಿಗೆ ಆಧಾರದಲ್ಲಿ ತೆಗೆದುಕೊಳ್ಳಲು ಉದ್ದೇಶಿಸಲಾಗಿದೆ.

9. 22–26 ಫೆಬ್ರವರಿ 2010 ರಲ್ಲಿ ಬ್ಯಾಂಕ್ ನಿಯೋಗವು ಯೋಜನೆಯ ಸಿದ್ಧತೆಯ ಪರಿಶೀಲನೆಯ ಸಮಯದಲ್ಲಿ ಸಾಂಪ್ರದಾಯಿಕ ಗುತ್ತಿಗೆ ಆಧಾರದಲ್ಲಿ ನೆರವೇರಿಸುವ 633 ಕಿ.ಮೀ. ರಸ್ತೆಗಳ ಪಟ್ಟಿಯನ್ನು ಅಂತಿಮಗೊಳಿಸಿರುತ್ತಾರೆ. ಏಷ್ಯಯನ್ ಅಭಿವೃದ್ಧಿ ಬ್ಯಾಂಕ್‌ನವರು ಬ್ಯಾಂಕ್ ನೆರವಿನಡಿಯಲ್ಲಿ ಆರ್ಥಿಕ ವಿಶ್ಲೇಷಣೆ, ಪರಿಸರದ ಮೇಲೆ ಕಡಿಮೆ ಪ್ರಭಾವ, ಹೆಚ್ಚಿನ ಭೂಸ್ವಾಧೀನ ಆಗದೆ ಇರುವ ಕಡಿಮೆ ಪುನರ್ವಸತಿ ಪ್ರಭಾವ ಹಾಗೂ ರಾಷ್ಟ್ರೀಯ ಉದ್ಯಾನ, ಪ್ರಾಣಿ, ವನ್ಯಗಳ ಸಂರಕ್ಷಣೆಯ ಸ್ಥಳ, ಪರಿಸರದ ಸೂಕ್ಷ್ಮತೆಯ ಪ್ರದೇಶಗಳ ಮುಖಾಂತರ ಹಾದು ಹೋಗದ ಆದ್ಯತೆಯ ರಸ್ತೆಗಳನ್ನು ತೆಗೆದುಕೊಳ್ಳಲು ಸಲಹೆಯನ್ನು ನೀಡಿರುತ್ತಾರೆ. ಅಂತಿಮಗೊಳಿಸಿರುವ ರಸ್ತೆಗಳ ಪಟ್ಟಿಯನ್ನು ಈ ಕೆಳಗೆ ನೀಡಲಾಗಿದೆ.

**List of Road Packages for Asian Development Bank Project**

| Sl. No. | Corridor No. | Link ID | Link Name | Length In Kms | Total Length Kms |
|---|---|---|---|---|---|
| 1 | 21 | 21C | Soundatti-Hulkatti | 38.40 | 139.02 |
| | | 21D | Ramdurga NH 218 | 45.73 | |
| | | 21E | Badami-Pattadakall | 21.53 | |
| | | 21F | Kamatagi | 33.36 | |
| 2 | 42 | 42A | Davangere-Santhebennur | 53.63 | 105.61 |
| | | 42B | Channagiri-Birur | 51.98 | |
| 3 | 64 | 64C | Magadi NH 48-Dobbaspet-Koratagere | 13.88 | 68.18 |
| | | 64D | | 20.44 | |
| | | 64E | | 33.86 | |
| 4 | 57 | 57A | Gubbi-chandrashekarapura | 49.03 | 108.62 |
| | | 57B | Beeragonahalli near | 26.43 | |
| | | 57C | Yediyur (NH-48) Mandya | 33.16 | |
| 5 | 27 | 27A | Shelvadi-Gadag-Mundagi | 39.20 | 72.10 |
| | | 27B | | 32.90 | |
| 6 | 31 | 31A | Mudgal-Tavaragere | 31.21 | 74.10 |
| | | 31B | Kanakagiri-Gangawathi | 42.89 | |
| 7 | 58 | 48A | Padubidri-Karkala | 27.80 | 27.80 |
| 8 | T13 | T13 | Jagaluru NH-13 | 9.25 | |
| | T17 | T17 | About 5 Km from SH-19 (KSHIP Road) | 5.13 | 14.38 |
| 9 | 64 | 64H | Pavagada to AP Border | 23.21 | 23.21 |
| | | | **Total** | | **633.02** |

10. ಸಾಂಪ್ರದಾಯಿಕ ಗುತ್ತಿಗೆ (EPC) ಗಳು ರೂಢಿಯಲ್ಲಿರುವ ಅಂತರಾಷ್ಟ್ರೀಯ ಸ್ಪರ್ಧಾತ್ಮಕ ಗುತ್ತಿಗೆ (ICB) ಗಳಾಗಿದ್ದು ಕಾಮಗಾರಿ ನಂತರದ ನಿರ್ವಹಣೆಯನ್ನು ಒಳಗೊಂಡಿರುವುದಿಲ್ಲ. ಈ ಗುತ್ತಿಗೆಗಳ ವೆಚ್ಚದ ಶೇಕಡ 80ರಷ್ಟನ್ನು ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ಭರಿಸಲಿದೆ.

11. ಕೆಶಿಫ್–2 ರ ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ನೆರವಿನಲ್ಲಿ ಸುಮಾರು 633 ಕಿ.ಮೀ.ಗಳ ರಸ್ತೆ ಅಭಿವೃದ್ಧಿಯನ್ನು ಕೈಗೊಳ್ಳಲು ಯೋಜಿಸಲಾಗಿದ್ದು ಇದಕ್ಕೆ ಸುಮಾರು ರೂ. 2038 ಕೋಟಿಗಳ ವೆಚ್ಚ ತಗಲಬಹುದೆಂದು ಅಂದಾಜಿಸಲಾಗಿದ್ದು, ಇದರಲ್ಲಿ ಭೂಸ್ವಾಧೀನ, ಪುನರ್ವಸತಿ, ಸಾರ್ವಜನಿಕ ಆಸ್ತಿಗಳ ತೆರವು, ಸಾಂಸ್ಥಿಕ ಅಭಿವೃದ್ಧಿ ಕ್ರಮಗಳು ಹಾಗೂ ಪರಿಸರ ರಕ್ಷಣಾ ಕ್ರಮಗಳಿಗೆ ಸಂಬಂಧಿಸಿದ ವೆಚ್ಚ ಸಹ ಒಳಗೊಂಡಿರುತ್ತದೆ. ಯೋಜನೆಯ ನಿಖರವಾದ ವೆಚ್ಚವು ಸಾಲ ಹಂಚಿಕೆಯ ರೀತಿ ಹಾಗೂ ವರ್ಷಾಸನ ಮೊತ್ತದ ಪಾವತಿ ಮುಂತಾದ ಅಂಶಗಳ ಮೇಲೆ ನಿರ್ಧರಿತವಾಗಿದೆ. ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಕೆಶಿಫ್–2ರ ಅನುಷ್ಠಾನಕ್ಕೆ ತಗಲುವ ಅಂದಾಜು ವೆಚ್ಚದ ವಿವರಗಳನ್ನು ಈ ಕೆಳಗೆ ಒದಗಿಸಲಾಗಿದೆ.

**(US and Million)**

| Sl. No. | Project Component | Total Cost | ADB Finance | Government |
|---|---|---|---|---|
| **A. Roda Infrastructure Development** | | | | |
| 1 | Land Acquisition and resettlement | 31.5 | – | 31.5 |
| 2 | Utility Shifting | 15.0 | – | 15.0 |
| 3 | Civil works | 315.00 | 252.00 | 63.00 |
| 4 | Construction Supervision Consultants | 9.00 | 9.00 | - |
| 5 | Black spot Program | 5.00 | – | 5.00 |
| **B. Institutional Development** | | | | |
| 6 | Equipment | 5.00 | 5.00 | - |

| | | | | |
|---|---|---|---|---|
| 7 | Road Planning and Asset Management Support | 2.00 | 2.00 | - |
| **C. Recurrent Costs** | | | | |
| 8 | Project Management | 3.00 | – | 3.00 |
| **D. Taxes and duties*** | | | | |
| **E. Total Base Cist** | | **385.50** | **268.00** | **117.50** |
| **F. Contingencies** | | | | |
| 9 | Physical Contingencies | 18.90 | 15.12 | 3.78 |
| 10 | Price Contingencies | 21.42 | 17.14 | 4.28 |
| **G. Financial charges during Implementation** | | | | |
| 11 | Interest during Construction | 21.11 | – | 21.11 |
| 12 | Commitment Charges | 1.00 | – | 1.00 |
| | **Total** | **447.93** | **300.26** | **147.67** |

* To be determined at the time of the fact-finding mission

12. ಕೆಷಿಫ್ ಯೋಜನೆಯ ಆಡಳಿತ ಮಂಡಳಿ ಹಾಗೂ ಚಾಲನಾ ಸಮಿತಿಗಳು ಕೆಷಿಪ್-2 ರಡಿಯಲ್ಲಿ ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ನೆರವಿನಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ರಸ್ತೆಗಳ ಪಟ್ಟಿಗೆ ಅನುಮೋದನೆ ನೀಡಿರುತ್ತದೆ. EPC ವಿಧಾನದಲ್ಲಿ ಗುತ್ತಿಗೆಗಳನ್ನು ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ಮಾರ್ಗಸೂಚಿ ಅನುಸಾರ EPC ರಸ್ತೆಗಳನ್ನು ಅನುಷ್ಠಾನಗೊಳಿಸಲು ಕಾರ್ಯ ಯೋಜನೆ ಹಮ್ಮಿಕೊಳ್ಳಲಾಗಿದೆ.
13. 633 ಕಿ.ಮೀ. ರಸ್ತೆಗಳ ಪಟ್ಟಿಯ ಅನುಸಾರ ಗುತ್ತಿಗೆ ದಸ್ತಾವೇಜುಗಳು ಸಾರ್ವಜನಿಕ ಆಸ್ತಿಗಳ ತೆರವುಗೊಳಿಸುವಿಕೆ, ಪುನರ್ವಸತಿ ಕಾರ್ಯಗಳು, ಭೂಸ್ವಾಧೀನ ಪ್ರಕ್ರಿಯೆ ಮುಂತಾದ ಯೋಜನಾ ಕೆಲಸಗಳನ್ನು ಪ್ರಾರಂಭಿಸಿದ್ದು, ಪ್ರಗತಿಯಲ್ಲಿರುತ್ತದೆ. EPC ವಿಧಾನದ ಗುತ್ತಿಗೆ ದಸ್ತಾವೇಜುಗಳು ಮತ್ತು ಮೇಲ್ವಿಚಾರಣಾ ಸಲಹೆಗಾರರ ಆಯ್ಕೆಯ RFP ದಸ್ತಾವೇಜುಗಳನ್ನು ಎಡಿಬಿಗೆ ಅನುಮೋದನೆಗಾಗಿ ಸಲ್ಲಿಸಲಾಗಿದೆ.
14. ದಿನಾಂಕ 05.04.2010 ರಂದು ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಕೆಶಿಫ್‌ನ 38ನೇ ಸ್ಟೀರಿಂಗ್ ಕಮಿಟಿಯ ಸಭೆಯಲ್ಲಿ ಕೆಶಿಫ್-2 ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ರಸ್ತೆಗಳ ಪಟ್ಟಿಗೆ ಹಾಗೂ ಅನುಷ್ಠಾನದ ಯೋಜನೆಗೆ ಸಂಚಿವ ಸಂಪುಟದ ಅನುಮೋದನೆ ಪಡೆಯಲು ಸೂಚನೆಗಳನ್ನು ನೀಡಿರುತ್ತದೆ. ಎಡಿಬಿ ಸಲಹೆಯ 633 ಕಿಮೀ. ರಸ್ತೆಗಳ ಪಟ್ಟಿಗೆ ಲೋಕೋಪಯೋಗಿ ಇಲಾಖೆಯ ಸನ್ಮಾನ್ಯ ಮಂತ್ರಿಗಳು ಸಹ ಒಪ್ಪಿಗೆ ನೀಡಿರುತ್ತಾರೆ. ಕೆಶಿಫ್ ಯೋಜನಾ ವೆಚ್ಚಕ್ಕಾಗಿ 2010-11ರ ಸಾಲಿನಲ್ಲಿ ರೂ. 270 ಕೋಟಿಗಳ ಅನುದಾನವನ್ನು ಒದಗಿಸಲಾಗಿದೆ. ಈ ಅನುದಾನವನ್ನು ವಿಶ್ವಬ್ಯಾಂಕ್ ಮತ್ತು ಏಷ್ಯಯನ್ ಅಭಿವೃದ್ಧಿ ಬ್ಯಾಂಕ್‌ನ ಯೋಜನೆಗಳಿಗೆ ಉಪಯೋಗಿಸಲು ಉದ್ದೇಶಿಸಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ:89:ಇಎಪಿ:2010 ಬೆಂಗಳೂರು, ದಿನಾಂಕ : 28-09-2010**

**ಸರ್ಕಾರವು ಈ ಕೆಳಕಂಡ ಅಂಶಗಳಿಗೆ ಅನುಮೋದನೆ ನೀಡಿರುತ್ತದೆ.**

i) ಕೆಶಿಫ್-2, ಎಡಿಬಿ ನೆರವಿನ ಯೋಜನೆಯ ಅಂದಾಜು ಯೋಜನಾ ಮೊತ್ತ ರೂ. 2038 ಕೋಟಿ. (ರೂ. ಎರಡು ಸಾವಿರದ ಮೂವತ್ತೆಂಟು ಕೋಟಿಗಳು ಮಾತ್ರ)

ii) ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಕೆಶಿಫ್-2ರಲ್ಲಿನ ರಸ್ತೆ ಅಭಿವೃದ್ಧಿಯನ್ನು ಕಂಡಿಕೆ 9ರಲ್ಲಿನ ಪಟ್ಟಿಯ ಅನುಸಾರ ಅನುಷ್ಠಾನಗೊಳಿಸುವುದು.

iii) ಕೆಶಿಫ್-2, EPC ಗುತ್ತಿಗೆಗಳ ವೆಚ್ಚದಲ್ಲಿ ಶೇಕಡ 20ರಷ್ಟು ಪುನರ್ವಸತಿ, ಭೂಸ್ವಾಧೀನ ಹಾಗೂ ಸಾರ್ವಜನಿಕ ಆಸ್ತಿ ತೆರವು, ಕಂಟಿನ್‌ಜೆನ್ಸಿ ಇತ್ಯಾದಿಗಳಿಗೆ ಪೂರ್ಣ ವೆಚ್ಚವನ್ನು ಸರ್ಕಾರದಿಂದ ಭರಿಸಲು.

iv) ಏಷ್ಯಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಕೆಶಿಫ್-2ರ ಅನುಷ್ಠಾನಕ್ಕೆ 2010-11ರ ನಂತರದ ಸಾಲಿನ ಆಯವ್ಯಯಗಳಲ್ಲಿ ಅಗ್ಯತ ಆರ್ಥಿಕ ವ್ಯವಸ್ಥೆ ಕಲ್ಪಿಸಲು ಆರ್ಥಿಕ ಇಲಾಖೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ PWD:532:FC-1:09 ದಿನಾಂಕ: 06-08-2010 ಹಾಗೂ ಯೋಜನಾ ಇಲಾಖೆಯ ಸಹಮಿತಿ ಸಂಖ್ಯೆ:ಪಿಡಿ:6:ಎಂಸಿಎಂ:2010 ದಿನಾಂಕ: 14-07-2010 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಉಮೇಶ್**

ಸರ್ಕಾರ ಪ್ರಧಾನ ಕಾರ್ಯದರ್ಶಿಗಳು

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ.

**ANNEXURE-I**

**GO No. PWD 61 EAP 2006 Bangalore Dated : 25-11-2006**

| **List of Selected Roads For Improvement Under KSHIP-II** | | |
|---|---|---|
| **Sl. No** | **Name of the Roads** | **(kms)** |
| 01 | Tinthni-Devadurga-Kalmala | 74 |
| 02 | Kushtagi (NH-13)-Tawargera-Sindhanur | 64 |
| 03 | Managoli-Talikota-Devapur | 110 |
| 04 | Mudgal-Kudithini (NH-63) | 115 |
| 05 | Konannanur-Hunsur-HD Kote | 89 |
| 06 | Sira-AP Border via Madhugiri-Gowribidanur-Chikaballapura-Chintamani-Srinivasapura-Mulbagal | 210 |
| 07 | Haliyal-Kudalasangama via Dharwad-Soundatti-Ramdurga-Badami-Pattadakal-Kamatgi-NH13 | 243 |
| 08 | Hassan-Periyapatna via Arakalagud-Ramanathpura | 77 |
| 09 | Hirekerur-Ranebennur (on NH-4) | 58 |
| 10 | Kudachi-Kabbur-Ghataprabha | 50 |
| 11 | Shikariura-Anandapuram (on NH-206) | 32 |
| 12 | Kotumachigi-Gajendragarh | 32 |
| 13 | Goa Border-Soundatti via Khnapur-Bagewadi-Bailhongal | 133 |
| 14 | Mudhol-Nippani vial Mahalingapur-kabbur | 104 |
| 15 | Belur-Kodlipet via Bikkodu-vatehole-Alur-Magge | 72 |
| 16 | Davenagere-Birur via Channagiri | 104 |
| 17 | Gangamula-Kottigehara | 63 |
| 18 | Hangal-Haveri (NH-4) | 32 |
| 19 | TN Border (Hunasanahalli)-AP Border via Kanakapura-Ramanagara-Magadi-Dobbespet-Koratagee-Madhugiri-Pavagada | 220 |
| 20 | Hole Narsipura to K.R. Nagar via Saligaram | 46 |
| 21 | Shelavadi-Harapanahalli via Gadag-Mundarigi | 112 |
| 22 | Indi-Zalaki (on NH-13) | 20 |
| 23 | Maharastra Border-Gulbaraga via Afzalpur | 99 |
| 24 | Hungund-Talikot via Muddebihal | 58 |
| 25 | Gubbi-Mandya via Yediyur-Kowdle | 109 |
| 26 | Jagalur-NH-13 | 10 |
| 27 | Hoskote-AP Border via Chintamani | 88 |
| 28 | Belthangadi to Bantwal (on NH-48) | 35 |
| 29 | Ramangaram-Saligramma via Thalavadi-Choulnankuppe-Huliyurdurga-Nagamangala-K.R.Pet Akkihebbal-Berya | 142 |
| 30 | Malavalli-Koratagere via Maddur.Kunigal-Tumkur | 135 |
| 31 | Shimga-Tadasa on NH-4 via Savalanga via Shikaripura-Shiralakoppa-Togarsi Anvatti-Gondi-Hangal | 171 |
| 32 | Jamkhandi-Maharastra Border via Terdal-Kudachi-Managsuli | 79 |
| 33 | Horanadu-Subramananaya via Kalasa-Kottigehara-Mudigere-Sakaleshpura Junction-Vanagur | 164 |
| 34 | Molkalmur to SH 19 (KSHIPI 1 Road) | 6 |
| 35 | Bidar-Chincholi vai Ekhelli (NH9) | 61 |
| 36 | Padubidri-Karkala | 28 |
| 37 | Kollegala-Tamilnadu Border via Hanur-MM Hills | 97 |
| 38 | Virajpet-Somawarpet via Madikere | 71 |
| | **Total Length (Kms)** | **3,411** |

**ವಿ. ಉಮೇಶ್**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು

ಪಿ.ಆರ್. 2570 ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರಿಗೆ ಹೊಸ ವಾಹನವನ್ನು ಖರೀದಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಎ.ಡಿ.ಎಂ (1) ಸಿಆರ್ 20/10-11, ದಿ: 17.05.2010.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಒಂದು ಅಂಬಾಸಿಡರ್ ವಾಹನ ಸಂಖ್ಯೆ: ಕೆಎ 01 ಜಿ-3355 ಒದಗಿಸಲಾಗಿದ್ದು, ಸದರಿ ವಾಹನ ದಿ: 16.05.2004ರಂದು ಅಪಘಾತಕ್ಕೆ ಒಳಪಟ್ಟಿದ್ದು, ಇದನ್ನು ದುರಸ್ತಿಗೊಳಿಸಲು ಸಾಧ್ಯವಾಗದೇ ಇರುವುದರಿಂದ ಸದರಿ ವಾಹನವನ್ನು ಅನುಪಯುಕ್ತ ವಾಹನವೆಂದು ಪರಿಗಣಿಸಿ ದಿ: 26.08.2009ರಂದು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗಿರುತ್ತದೆ. ಎಂದು ತಿಳಿಸಿರುತ್ತಾರೆ. ಪ್ರಸ್ತುತ ಜಿಲ್ಲಾಧಿಕಾರಿಗಳು ತಾತ್ಕಾಲಿಕ ವ್ಯವಸ್ಥೆ ಮೇರೆಗೆ ಸಿ.ಆರ್.ಎಫ್ ಕಾರ್ಯಕ್ಕಾಗಿ ಸರ್ಕಾರದಿಂದ ಮಂಜೂರಾದ ವಾಹನ ಸಂಖ್ಯೆ:ಕೆಎ 04 ಜಿ-333 ವಾಹನವನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಸಿ.ಆರ್.ಎಫ್ ನಿಧಿಯಿಂದ ಖರೀದಿಸಿದ ವಾಹನವನ್ನು ಬರ ಪರಿಹಾರ / ನೆರೆ ಹಾವಳಿ ಕಾರ್ಯಕ್ಕಾಗಿ ಉಪಯೋಗಿಸಲು ಅವಶ್ಯವಿರುವುದರಿಂದ ಜಿಲ್ಲಾಧಿಕಾರಿಗಳು, ಬೆಂಗಳೂರು ಇವರಿಗೆ ಪ್ರತ್ಯೇಕ ವಾಹನ ಅವಶ್ಯವಿರುವುದಾಗಿ ತಿಳಿಸಿ Maruthi Suzuki SX4 ZXI ಮಾದರಿಯ ವಾಹನ ಖರೀದಿಸಲು ಹಾಗೂ ಇದಕ್ಕೆ ತಗಲುವ ವೆಚ್ಚ ರೂ. 7,51,698/-ಗಳನ್ನು ಸರ್ಕಾರಿ ಜಮೀನಿನ ಹರಾಜಿನಿಂದ ಸಂಗ್ರಹಿಸಿದ ಬಡ್ಡಿ ಹಣ ರೂ. 23 ಲಕ್ಷಗಳಿಂದ ಭರಿಸಲು ಅನುಮತಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 437 ಎಲ್‌ಜಬಿ 2010, ಬೆಂಗಳೂರು, ದಿನಾಂಕ : 01.10.2010**

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಉಪಯೋಗಕ್ಕಾಗಿ Maruthi Suzuki SX4 ZXI ಮಾದರಿಯ ವಾಹನವನ್ನು ಸರ್ಕಾರದ ಆದೇಶದಲ್ಲಿ ನಿಗಧಿ ಪಡಿಸಿದ ರೂ. 5 ಲಕ್ಷಗಳ ಮಿತಿಯೊಳಗೆ ಖರೀದಿಸಲು ಸರ್ಕಾರಿ ಜಮೀನಿನ ಹರಾಜಿನಲ್ಲಿ ಸಂಗ್ರಹಿಸಿದ ಬಡ್ಡಿ ಹಣ ರೂ. 23 ಲಕ್ಷಗಳಿಂದ ಭರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಈ ಮೊತ್ತವನ್ನು ಸಂಬಂಧಪಟ್ಟ ಕಛೇರಿಯ ಹಣ ಸೆಳೆಯುವ ಅಧಿಕಾರಿಗಳ ಲೆಕ್ಕ ಶೀರ್ಷಿಕೆಗೆ ಬಿಡುಗಡೆ ಮಾಡುವಂತೆಯೂ ಸಹ ಸರ್ಕಾರವು ಈ ಮೂಲಕ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 542 ವೆಚ್ಚ-7/2010, ದಿ: 12.08.2010ರಲ್ಲಿ ನೀಡಿದ ಸಹಮತಿ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಇ. ಈಶ್ವರ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಮಂ).

ಪಿ.ಆರ್. 2571

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಹೆಚ್. ಸರಳಾ, (ತಹಶೀಲ್ದಾರ್ ಗ್ರೇಡ್-2), ಪ್ರಸ್ತುತ ಸ್ಥಳ ನಿರೀಕ್ಷಣೆಯಲ್ಲಿರುವ ಇವರಿಗೆ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** (1) ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ ಇವರ ಪತ್ರ ಸಂಖ್ಯೆ: ರಾಜಿಕ ಸಿಬ್ಬಂದಿ/ಸಿಆರ್/262/09-10 ದಿನಾಂಕ: 04-05-2010.

(2) ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ ಇವರ ಪತ್ರ ಸಂಖ್ಯೆ: ರಾಜಿಕ ಸಿಬ್ಬಂದಿ/ಸಿಆರ್/262/09-10 ದಿನಾಂಕ: 01-09-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 04-05-2010ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ ಇವರು ಶ್ರೀಮತಿ ಹೆಚ್ ಸರಳಾ, (ತಹಶೀಲ್ದಾರ್ ಗ್ರೇಡ್-2) ಪ್ರಸ್ತುತ ಸ್ಥಳ ನಿರೀಕ್ಷಣೆಯಲ್ಲಿರುವ ಇವರು ಜಿಲ್ಲಾಧಿಕಾರಿಗಳ ಮೂಲಕ ಮನವಿಯನ್ನು ಸಲ್ಲಿಸಿ, ತಮ್ಮ ಕೌಟುಂಬಿಕ ಕಾರಣಗಳಿಂದ ಹಾಗೂ ಆರೋಗ್ಯ ಸರಿ ಇಲ್ಲದ ಕಾರಣ ಸ್ವಯಂ ನಿವೃತ್ತ ಹೊಂದಲು ಇಚ್ಛಿಸಿದ್ದು, ಅದರಂತೆ ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಈ ಬಗ್ಗೆ ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ, ಇವರಿಂದ ಶ್ರೀಮತಿ ಹೆಚ್ ಸರಳಾ, ಪ್ರಸ್ತುತ ಸ್ಥಳ ನಿರೀಕ್ಷಣೆಯಲ್ಲಿರುವ ಇವರ ಸ್ವಯಂ ನಿವೃತ್ತಿ ಕುರಿತಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 01-09-2010.ರ ಪತ್ರದಲ್ಲಿ ಶ್ರೀಮತಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಆಗಲೀ ಮತ್ತು ಹೂಡುವ ಸಂಭವ ಇಲ್ಲವೆಂದು ಹಾಗೂ ಸದರಿಯವರಿಂದ ಸರ್ಕಾರಕ್ಕೆ ಸಂದಾಯವಾಗುವ ತಕ್ಕ ಯಾವುದೇ ಆರ್ಥಿಕ ಬಾಕಿ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಅದರಂತೆ ಸರ್ಕಾರವು ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀಮತಿ ಹೆಚ್ ಸರಳಾ, (ತಹಶೀಲ್ದಾರ್ ಗ್ರೇಡ್-2) ಪ್ರಸ್ತುತ ಸ್ಥಳ ನಿರೀಕ್ಷಣೆಯಲ್ಲಿರುವ ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲವೆಂದು ಹಾಗೂ ಹೂಡಲು ಉದ್ದೇಶಿಸಿಲ್ಲವೆಂದು ಮತ್ತು ಸದರಿಯವರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಬರಬೇಕಾಗಿಲ್ಲವೆಂದು ದೃಢೀಕರಿಸಿಕೊಂಡು ಸದರಿಯವರಿಗೆ ದಿನಾಂಕ: 30-09-2010 ರಂದು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285(1)(ಬಿ) ಪ್ರಕಾರ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 317 ಎಎಸ್‌ಡಿ 2010 ಬೆಂಗಳೂರು, ದಿನಾಂಕ : 28–09–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ಹೆಚ್. ಸರಳಾ, (ತಹಶೀಲ್ದಾರ್ ಗ್ರೇಡ್–2) ಪ್ರಸ್ತುತ ಸ್ಥಳ ನಿರೀಕ್ಷಣೆಯಲ್ಲಿರುವ ಇವರ ಕೋರಿಕೆಯಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 285(1)(ಬಿ) ಪ್ರಕಾರ ದಿನಾಂಕ: 30–09–2010ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವ–ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್.ದೇಸಾಯಿ**
ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ
(ಸೇವೆಗಳು ಮತ್ತು ವಿಪತ್ತು ನಿರ್ವಹಣೆ).

ಪಿ.ಆರ್. 2572

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್.ಸಿ.ಅಗಸೀಮನಿ, ಸರ್ಕಾರಿ ಅಭಿಯೋಜಕರು, ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ ಇವರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ–I ಸಂ:ಲಾ 15 ಪಿಪಿಇ 83, ದಿನಾಂಕ: 05.04.1984,
2) ಸರ್ಕಾರದ ಅಧಿಸೂಚನೆ ಸಂ:ಲಾ 206 ಪಿಪಿಇ 87, ದಿನಾಂಕ: 27.12.1989,
3) ಸರ್ಕಾರದ ಅಧಿಸೂಚನೆ ಸಂ:ಲಾ 112 ಪಿಪಿಇ 97, ದಿನಾಂಕ: 03.02.1999,
4) ಸರ್ಕಾರದ ಆದೇಶ ಸಂ:ಎಫ್‌ಡಿ 31 ಎಸ್‌ಆರ್‌ಪಿ 2007 (X), ದಿನಾಂಕ: 14.08.2008,
5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿಪಿಎನ್/ ಸಿಶಾ.1/98(14)/2008–09, ದಿನಾಂಕ: 29.03.2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 05.04.1984ರ ಸರ್ಕಾರದ ಅಧಿಸೂಚನೆಯ–Iರ ಕ್ರ.ಸಂ:9ರನ್ವಯ ಶ್ರೀ ಎಸ್.ಸಿ.ಅಗಸೀಮನಿ, ಸರ್ಕಾರಿ ಅಭಿಯೋಜಕರು, ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ದಿನಾಂಕ: 18.04.1984ರ ಅಪರಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 27.12.1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:7ರನ್ವಯ ಶ್ರೀ ಎಸ್.ಸಿ.ಅಗಸೀಮನಿರವರು ಹಿರಿಯ ಸಹಾಯ ಸರ್ಕಾರಿ ಅಭಿಯೋಜಕರು / ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 14.02.90ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 03–02–1999ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:7ರನ್ವಯ ಶ್ರೀ ಎಸ್.ಸಿ.ಅಗಸೀಮನಿರವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 03.03.1999ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 29.03.2010ರ ಪತ್ರದಲ್ಲಿ, ಮೇಲೆ (1) ರಿಂದ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಗಳನ್ವಯ ಶ್ರೀ ಎಸ್.ಸಿ.ಅಗಸೀಮನಿರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ಪ್ರಸ್ತುತ ರೂ. 18150–26925ರ ವೇತನ ಶ್ರೇಣಿಯ ಗ್ರೂಪ್–ಎ ಅಧಿಕಾರಿಯ ಹುದ್ದೆಯಾದ ಸರ್ಕಾರಿ ಅಭಿಯೋಜಕರು ಹುದ್ದೆಯಲ್ಲಿ ದಿನಾಂಕ:03.03.1999 ರಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಗೆ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಸಲ್ಲಿಸಿರುತ್ತಾರೆ. ಸದರಿಯವರು ಅವರ ಮುಂದಿನ ಹುದ್ದೆಯಾದ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ಬಡ್ತಿ ಪಡೆಯಲು ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಅರ್ಹರಿರುತ್ತಾರೆ. ಅವರು ಈ ಹಿಂದಿನ ಯಾವುದೇ ಹುದ್ದೆಯಲ್ಲಿ ಆಯ್ಕೆಕಾಲಿಕ ಶ್ರೇಣಿಯನ್ನಾಗಲಿ, ಹಿರಿಯ ವೇತನ ಶ್ರೇಣಿಯನ್ನಾಗಲಿ ಅಥವಾ ಹೆಚ್ಚುವರಿ ವೇತನ ಬಡ್ತಿಯನ್ನಾಗಲಿ ಪಡೆದಿರುವುದಿಲ್ಲ. ಸದರಿಯವರು ಅವರ ಸೇವಾವಧಿಯಲ್ಲಿ ಯಾವುದೇ ವೇತನ ರಹಿತ / ಅಸಾಧಾರಣ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಿಲ್ಲ. ಇವರ ಮೇಲೆ ಕ್ರಿಮಿನಲ್ ಪ್ರಕರಣ ದಾಖಲಾಗಿರುವುದಿಲ್ಲ ಹಾಗೂ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಅಥವಾ ಹೂಡಲು ಉದ್ದೇಶಿಸಿರುವುದಿಲ್ಲ. ಆದ್ದರಿಂದ, ಮೇಲೆ (4)ರಲ್ಲಿ ಓದಲಾದ ದಿನಾಂಕ: 14.08.2008ರ ಸರ್ಕಾರದ ಆದೇಶದನ್ವಯ, ರೂ. 19050–27600ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಪಡೆಯಲು ಅರ್ಹರಿದ್ದು, ದಿನಾಂಕ: 01.08.2008 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ, ಆದೇಶವನ್ನು ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ದಿನಾಂಕ: 01.08.2008ಕ್ಕೆ ನಿಟಕಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿದೆ. ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಒಇ 112 ಪಿಪಿಇ 2010, ಬೆಂಗಳೂರು, ದಿನಾಂಕ : 23ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಸಿ.ಅಗಸೀಮನಿ, ಸರ್ಕಾರಿ ಅಭಿಯೋಜಕರು, ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ ಇವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಯಲ್ಲಿ (ವೇತನ ಶ್ರೇಣಿ ರೂ. 18150–26925) ದಿನಾಂಕ: 03.03.1999 ರಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಯ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿಯಿಲ್ಲದೇ ಪೂರೈಸಿರುವುದರಿಂದ, ಸರ್ಕಾರದ ಆದೇಶ ಸಂ:ಎಫ್‌ಡಿ 31 ಎಸ್‌ಆರ್‌ಪಿ 2007(X), ದಿನಾಂಕ: 14.08.2008ರ ಅನುಸಾರ ದಿನಾಂಕ: 01.08.2008 ರಿಂದ ಅನ್ವಯಿಸುವಂತೆ ಆಯ್ಕೆ ದರ್ಜೆ ವೇತನ ಶ್ರೇಣಿಯಾದ ರೂ. 19050–27600ನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 2573

## WATER RESOURCES SECRETARIAT
## CORRIGENDUM

**No: Saneeyi 236 Masavi 2009, Bangalore, Dated : 04.10.2010.**

In the preamble of the Government Order No. SANEEYEE 236 MASAVI 2009 (5), dated: 16.09.2010, under Sl. No. (1) of the works list, the name of the taluk for the work, "Construction of Pickup across Kuve kallu oddu." May be read as "Mudigere" instead of "Kadur" Other contents of the Government Order remain unchanged.

By order and in the name of the Governor of Karnataka,

**RUDRAMURTHY**

Ex officio Under Secretary to Government,

P.R. 2575 Water Resources Department (Minor Irrigation)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** 2010–11ನೇ ಶೈಕ್ಷಣಿಕ ಸಾಲಿನಿಂದ ಕೆ.ಎಸ್.ಎಸ್. ಶಿಕ್ಷಣ ಸಮಿತಿ, ಗದಗ, ಈ ಸಂಸ್ಥೆಯ ವಿಜಯನಗರ ಶಿಕ್ಷಣ ಮಹಾವಿದ್ಯಾಲಯದ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1) ಎನ್.ಸಿ.ಟಿ.ಇ. ಪತ್ರ ಸಂಖ್ಯೆ: F. SRO/NCTE/2010-11/20638, ದಿನಾಂಕ: 24–8–2010.

2) ಕಾಲೇಜಿನ ಅಧ್ಯಕ್ಷರ ಪತ್ರ ದಿನಾಂಕ: 21–9–2010.

**ಪ್ರಸ್ತಾವನೆ :**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಆದೇಶದಲ್ಲಿ ಕೆ.ಎಸ್.ಎಸ್. ಶಿಕ್ಷಣ ಸಮಿತಿ, ಗದಗ, ಈ ಸಂಸ್ಥೆಯ ವಿಜಯನಗರ ಶಿಕ್ಷಣ ಮಹಾವಿದ್ಯಾಲಯದಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 25 (ಇಪ್ಪತ್ತೈದು) ರಿಂದ 35 (ಮುವತ್ತೈದು) ಕ್ಕೆ ಹೆಚ್ಚಿಸಿ ಆದೇಶಿಸಿರುತ್ತದೆ. ಅದರಂತೆ, ಉಲ್ಲೇಖ (2)ರಲ್ಲಿರುವ ಪತ್ರದಲ್ಲಿ ಕಾಲೇಜಿನ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಹೆಚ್ಚಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 238 ಯುಕೆವಿ 2010, ಬೆಂಗಳೂರು, ದಿನಾಂಕ : 25–9–2010**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ/ಬಿ.ಪಿ.ಇಡಿ. ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರನ್ನು ಚಲಾಯಿಸಿ, **2010–11ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ಕೆ.ಎಸ್.ಎಸ್. ಶಿಕ್ಷಣ ಸಮಿತಿ, ಗದಗ, ಈ ಸಂಸ್ಥೆಯ ವಿಜಯನಗರ ಶಿಕ್ಷಣ ಮಹಾವಿದ್ಯಾಲಯದಲ್ಲಿ ಅಸ್ತಿತ್ವದಲ್ಲಿರುವ ಎಂ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 25 (ಇಪ್ಪತ್ತೈದು) ರಿಂದ 35 (ಮುವತ್ತೈದು) ಕ್ಕೆ ಹೆಚ್ಚಿಸಿ ನಿಗದಿಪಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಬಿ.ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2577 ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ತುಮಕೂರು ನಗರದ ಉಪ್ಪಾರಹಳ್ಳಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 40–41ರ ರಸ್ತೆ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ. ಮೂಅಇ 65 ರಾರಾಹೆ 2007, ದಿನಾಂಕ: 27–7–07

(2) ಸರ್ಕಾರದ ಆದೇಶ ಸಂಖ್ಯೆ. ಮೂಅಇ 65 ರಾರಾಹೆ 2007, ದಿನಾಂಕ: 15–12–2008

(3) ಸರ್ಕಾರದ ಆದೇಶ ಸಂಖ್ಯೆ. ಮೂಅಇ 34 ರಾರಾಹೆ 2009, ದಿನಾಂಕ: 06–02–2010ರ ಸರ್ಕಾರಿ ಆದೇಶ.

(4) ಸರ್ಕಾರದ ಆದೇಶ ಸಂಖ್ಯೆ. ಮೂಅಇ 34 ರಾರಾಹೆ 2009, ದಿನಾಂಕ: 10–06–2010ರ ಸರ್ಕಾರಿ ಆದೇಶ.

(5) ಮುಖ್ಯ ಇಂಜಿನಿಯರ್ ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡ, (ದ) ಬೆಂಗಳೂರು ಇವರ ದಿನಾಂಕ: 10–05–2010 ಪತ್ರ ಸಂಖ್ಯೆ: ಸಿಬಿಎಸ್:ಹಭಪ:34:ಹಭಪ:5465: 2009–10. ದಿ: 4.9.2010

**ಪ್ರಸ್ತಾವನೆ :**

ತುಮಕೂರು ನಗರದ ಉಪ್ಪಾರಹಳ್ಳಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 40–41ರ ರಸ್ತೆ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣ ಕಾಮಗಾರಿಯನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರ ಶೇ 50:50 ವೆಚ್ಚವನ್ನು ಹಂಚಿಕೆ ಆಧಾರದ ಮೇಲೆ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಹಾಗೂ ಸದರಿ

ರಸ್ತೆಯ ಕಾಮಗಾರಿಗೆ ಬೇಕಾಗುವ ಭೂಸ್ವಾಧೀನ ಹಾಗೂ ನಾಗರೀಕ ಸೌಲಭ್ಯಗಳ ಸ್ಥಳಾಂತರಕ್ಕೆ ಕ್ರಮವಾಗಿ ರೂ. 342.00 ಮತ್ತು 349.10 ಲಕ್ಷಗಳನ್ನು ಕಾಮಗಾರಿಗೆ ತಗಲುವ ಶೇ 50ರಷ್ಟು ರಾಜ್ಯ ಸರ್ಕಾರದ ಪಾಲಿನ ಮೊತ್ತದಲ್ಲಿ ರೂ. 500.00 ಲಕ್ಷಗಳನ್ನು ಮೇಲೆ ಓದಲಾದ(1), (2), (3) ಮತ್ತು (4) ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

2. ಎಲ್.ಸಿ.ಸಂಖ್ಯೆ 40–41 ರಲ್ಲಿ ರಸ್ತೆ ಮೇಲು ಸೇತುವೆಗೆ ಕೂಡು ರಸ್ತೆ ನಿರ್ಮಿಸುವ ಕಾಮಗಾರಿಯು ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುವುದರಿಂದ ಹಾಗೂ ರಸ್ತೆ ಕಾಮಗಾರಿಗಳ ಕಂಬಗಳ ಕ್ಯಾಪ್ ತಳಮಟ್ಟಕ್ಕೆ ಪ್ರಗತಿ ಸಾಧಿಸಿದ್ದು ಮತ್ತು ಇನ್ನಿತರ ಕಾಮಗಾರಿಗಳು ಸಹ ನಡೆಯುತ್ತಿರುವುದರಿಂದ ಮೇಲೆ ಓದಲಾದ (3) ರ ಆದೇಶದಲ್ಲಿ ಬಿಡುಗಡೆ ಮಾಡಿರುವ ಮೊತ್ತ ರೂ. 3.00 ಕೋಟಿಗಳಲ್ಲಿ ದಿನಾಂಕ: 31.03.2010 ರ ಅಂತ್ಯಕ್ಕೆ ರೂ. 1,83,29,041/– ಲಕ್ಷಗಳನ್ನು ಮಾತ್ರ ಉಪಯೋಗಿಸಿಕೊಂಡಿದ್ದು, ಉಳಿದ ಮೊತ್ತ ರು 1,16,70,959/– ಲಕ್ಷಗಳು ಲ್ಯಾಪ್ಸ ಆಗಿದ್ದು, ಡ್ರಾ ಮಾಡಿರುವ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ನೀಡಿರುವುದನ್ನು ಪರಿಗಣಿಸಿ ಮೇಲೆ ಓದಲಾದ (3)ರ ಆದೇಶದಲ್ಲಿ ರೂ. 2.00 ಕೋಟಿಯನ್ನು ಬಿಡುಗಡೆ ಮಾಡಲಾಗಿತ್ತು. ಒಟ್ಟಾರೆ ಈ ಯೋಜನೆಗೆ ರಾಜ್ಯ ಸರ್ಕಾರವು ರೂ. 11.91 ಕೋಟಿಯನ್ನು (ಲ್ಯಾಪ್ಸ್ ಆಗಿರುವ ಮೊತ್ತ ರೂ. 1,16,70.959/–ಗಳನ್ನು ಒಳಗೊಂಡು) ಬಿಡುಗಡೆ ಮಾಡಿದಂತಾಗಿದೆ.

3. ಸದರಿ ಕಾಮಗಾರಿಗೆ ತಗಲುವ ಮೊತ್ತದಲ್ಲಿ ರಾಜ್ಯ ಸರ್ಕಾರದ ಪಾಲಿನ ಮೊತ್ತ ರೂ. 3.00 ಕೋಟಿಯನ್ನು ಬಿಡುಗಡೆ ಮಾಡಬೇಕೆಂದು ಮೇಲೆ ಓದಲಾದ (5)ರ ಪತ್ರದಲ್ಲಿ ಲೋಕೋಪಯೋಗಿ ಇಲಾಖೆಯ (ದಕ್ಷಿಣ) ಮುಖ್ಯ ಇಂಜಿನಿಯರವರು ಕೋರಿದ್ದಾರೆ.

4. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 34 ರಾರಾಹೆ 2009, ಬೆಂಗಳೂರು, ದಿನಾಂಕ : 27.9.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರು ನಗರದ ಉಪ್ಪಾರಹಳ್ಳಿ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 40–41ರ ರಸ್ತೆ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣದ ಕಾಮಗಾರಿಗೆ ರಾಜ್ಯ ಸರ್ಕಾರದ ಪಾಲಿನ ಮೊತ್ತದಲ್ಲಿ ರೂ. 85.00 ಲಕ್ಷಗಳನ್ನು (ರೂಪಾಯಿ ಏಂಭತ್ತೈದು ಲಕ್ಷಗಳು ಮಾತ್ರ) 2010–2011 ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "5465–01–190–3–04–(ಯೋಜನೆ)–211 ಬಂಡವಾಳ" ಇದರ ಅಡಿಯಲ್ಲಿ ರಸ್ತೆ ಮೇಲುಸೇತುವೆ/ಕೆಳಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ. 30.00 ಕೋಟಿಗಳಿಂದ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು, ಜಲಸಾರಿಗೆ ಇಲಾಖೆ, ತುಮಕೂರು ವಿಭಾಗ, ತುಮಕೂರು ಇವರಿಗೆ ಬಿಡುಗಡೆ ಮಾಡಿದೆ.

2. ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು ಸಾದಿಲ್ವಾರು ಬಿಲ್ಲಿನ ಮೂಲಕ ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಕೊಡತಕ್ಕದ್ದು.

3. ಈ ಆದೇಶವನ್ನು ದಿನಾಂಕ: 16.5.2008 ಸಂಖ್ಯೆ.FD 1TFP 2008 ಸರ್ಕಾರಿ ಆದೇಶದಲ್ಲಿ ಇಲಾಖೆಯು ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಶಿವಕುಮಾರಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

ಪಿ.ಆರ್. 2578

## ಆರ್ಥಿಕ ಸಚಿವಾಲಯ

**ವಿಷಯ :** ದಿನಾಂಕ: 1.1.2010 ರಲ್ಲಿದ್ದಂತೆ ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ:ಆಇ 145 ರಾಲೆಪ 2010, ದಿ: 26.05.2010
2) ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂ: ಸಿಎಸ್ಎ 2 ಎಸ್ಎಂಎಸ್ 2001/1920(ಎ), ದಿ: 27.7.2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶದಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರ ಜ್ಯೇಷ್ಠತಾ ಪಟ್ಟಿಯನ್ನು ದಿ: 1.1.2010ರಲ್ಲಿದ್ದಂತೆ ಪ್ರಕಟಿಸಿ ಈ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಅಂತಹ ಅಧಿಕಾರಿಗಳು 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಸೂಕ್ತ ದಾಖಲಾತಿಗಳೊಂದಿಗೆ ಸಲ್ಲಿಸುವಂತೆ ತಿಳಿಸಲಾಗಿತ್ತು. ಅದರಂತೆ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಈ ಬಗ್ಗೆ ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿ ನೀಡಿದ ವರದಿಯಲ್ಲಿ ಶ್ರೀ ಎ.ಲೋಕೇಶ್ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ: (3)ರಲ್ಲಿ ನಿಗದಿಪಡಿಸಿರುವ ಬಗ್ಗೆ ಆಕ್ಷೇಪಣೆಗಳು ಸ್ವೀಕೃತವಾಗಿದ್ದು, ಇವರಿಗೆ ಉಪ ನಿಯಂತ್ರಕರ ಹುದ್ದೆಗೆ ಕರ್ನಾಟಕ ಸಿವಿಲ್ ಸೇವೆಗಳು (ವೇತನ ಬಡ್ತಿ ಮತ್ತು ಪಿಂಚಣಿ ಕ್ರಮಬದ್ಧಗೊಳಿಸುವುದು) ನಿಯಮಗಳು 1978ರ ನಿಯಮ 2(1)(ಎ)ರನ್ವಯ ಪೂರ್ವಾನ್ವಯ ದಿನಾಂಕ: 28.7.2001 ಎಂದು ಪರಿಗಣಿಸಿ ಆದೇಶ ಹೊರಡಿಸುವವರೆಗೆ ಇವರಿಗೆ ದಿನಾಂಕ: 28.7.2001 ರಿಂದ ಜ್ಯೇಷ್ಠತೆ ನಿಗಧಿಪಡಿಸಲು ಅವಕಾಶ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ವರದಿಯನ್ನು ಪರಿಶೀಲಿಸಲಾಗಿದೆ.

ಶ್ರೀ ಎ.ಲೋಕೇಶ್ ಇವರನ್ನು ಕರ್ನಾಟಕ ಸಾಮಾನ್ಯ ನೇಮಕಾತಿ ನಿಯಮಾವಳಿಗಳ ನಿಯಮ 16ರನ್ವಯ ಸಾರ್ವಜನಿಕ ಹಿತದೃಷ್ಟಿಯಿಂದ ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ವಿಲೀನಗೊಳಿಸಿ ಆದೇಶಿಸಿರುವುದರಿಂದ ಇವರ ಜ್ಯೇಷ್ಠತೆಯನ್ನು ಕೆ.ಸಿ.ಎಸ್. (ಜ್ಯೇಷ್ಠತಾ) ನಿಯಮಾವಳಿಯ ನಿಯಮ 6(2)ನೇ ಪರಂತುಕದನ್ವಯ ನಿರ್ಧರಿಸಬೇಕಾಗುತ್ತದೆ ಮತ್ತು ಈ ಅಧಿಕಾರಿಯು ನಿಗಧಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದ್ದು, ಇವರು ಹಿಂದೆ ನೇಮಕಾತಿ ಹೊಂದಿದ ದಿನಾಂಕದಿಂದ ಜ್ಯೇಷ್ಠತೆ ಪಡೆಯಲು ಅರ್ಹರಿರುತ್ತಾರೆ. ಆದ್ದರಿಂದ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ: (3)ರಲ್ಲಿ ನಿಗಧಿಪಡಿಸಿರುವುದು ನಿಯಮಾನುಸಾರವಾಗಿದೆಯೆಂದು ತೀರ್ಮಾನಿಸಲಾಗಿದೆ. ಆದ್ದರಿಂದ ದಿನಾಂಕ: 1.1.2010ರಲ್ಲಿದ್ದಂತೆ ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರುಗಳ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 145 ರಾಲೆಪ 2010(3) ಬೆಂಗಳೂರು, ದಿನಾಂಕ : 30ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿ: 1.1.2010ರಲ್ಲಿದ್ದಂತೆ ರಾಜ್ಯ ಲೆಕ್ಕಪತ್ರ ಇಲಾಖೆ ಉಪ ನಿಯಂತ್ರಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಈ ಮೂಲಕ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**ದಿನಾಂಕ: 01.01.2010ರಲ್ಲಿದ್ದಂತೆ ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರುಗಳ ಜ್ಯೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು (ಶ್ರೀಮತಿ/ಶ್ರೀ) | ಹುಟ್ಟಿದ ದಿನಾಂಕ | ಕೆಲಸಕ್ಕೆ ಸೇರಿದ ದಿನಾಂಕ | ಹುದ್ದೆಗೆ ಧಾರಣ ಮಾಡಿದ ದಿನಾಂಕ |
|---|---|---|---|---|
| 1 | 2 | 3 | 4 | 5 |
| 1. | ಕಮಲಾಪುರ್‌ಕರ್ ರವಿ | 10–07–1959 | 27–11–1993 | 27–08–1999 |
| 2. | ವಿ.ಎಸ್.ಶ್ರೀಕಂಠ | 03–12–1952 | 27–04–1973 | 16–06–1999 |
| 3. | ಲೋಕೇಶ್ ಎ. | 23.02.1968 | 24.10.1996 | 28.7.2001 (ವಾಣಿಜ್ಯ & ಕೈಗಾರಿಕೆ ಇಲಾಖೆಯಲ್ಲಿ ಉಪ ನಿರ್ದೇಶಕರ ವೃಂದಕ್ಕೆ ಬಡ್ತಿ ಹೊಂದಿದ ದಿನಾಂಕ). ಸರ್ಕಾರದ ದಿ: 7.12.2009 ಸಂಖ್ಯೆ:ಆಇ 208 ರಾಲೆಪ 2008ರ ಆದೇಶದಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ವಿಲೀನಗೊಂಡು ಉಪ ನಿಯಂತ್ರಕರ ಹುದ್ದೆಗೆ ದಿ: 11.12.2009 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. |
| 4. | ಜಿ. ರತ್ನಮಾಲ | 26–07–1958 | 08–07–1985<br>05–04–1997 | 04–04–2002 |
| 5. | ಕೆ.ಹೆಚ್.ಜಯರಾಮಯ್ಯ | 20–07–1951 | 22–05–1973 | 13–12–2004 |
| 6. | ಎ.ಶಿವರಾಂ | 02–07–1952 | 03–09–1973 | 03–06–2005 |
| 7. | ಗುರುಲಿಂಗಪ್ಪ ಹೊಸಮವಿ | 01–08–1953 | 22–11–1981 | 01–10–2009 |
| 8. | ಟಿ.ಮಾದಯ್ಯ | 25–08–1953 | 10–05–1976 | 16–09–2009 |
| 9. | ಸಿ.ಲಕ್ಷ್ಮಿಕಾಂತ ರೆಡ್ಡಿ | 01–12–1950 | 04–08–1971<br>12–11–1974 | 26–06–2009 |
| 10. | ಎ.ಪ್ರಭಾವತಿ | 07–01–1951 | 22–09–1971<br>12–11–1974 | 29–10–2009 |
| 11. | ಮದ್ದೂರು ತಿಮ್ಮಯ್ಯ | 20–10–1951 | 28–10–1997 | 19–09–2009 |
| 12. | ಕೆ.ಆರ್.ನಾಯಕ್ | 01–06–1954 | 05–01–1984 | 22–09–2009 |
| 13. | ಜಗದೀಶ್ | 07–02–1955 | 30–11–1983 | 20–10–2009 |
| 14. | ಟಿ.ಮಲ್ಲಯ್ಯ | 05–06–1955 | 14–12–1983 | 24–09–2009 |
| 15. | ಎಂ.ಪಿ.ಅನಿತಾ | 16–03–1975 | 19–07–1999 | 17–09–2009 |
| 16. | ಎಂ.ವಿ.ವಿಜಯಲಕ್ಷ್ಮಿ | 11–06–1973 | 15–07–1999 | 16–09–2009 |
| 17. | ಎಂ.ಮುನಿವೀರಪ್ಪ | 20–03–1970 | 15–07–1999 | 15–10–2009 |
| 18. | ಡಿ.ಸಿ.ಶಿವಣ್ಣಗೌಡ | 06–03–1952 | 15–04–1974 | 16–09–2009 |
| 19. | ಎಂ.ಎಸ್. ಕಲಾವತಿ | 20–01–1951 | 23–06–1973 | 23–09–2009 |
| 20. | ಎಂ.ಎಲ್.ಶಾಮಸುಂದರ್ | 05–09–1950 | 07–05–1973 | 22–09–2009 |
| 21. | ಪಿ.ರುದ್ರಪ್ಪ | 12–08–1950 | 09–02–1974 | 01–01–2010 |
| 22. | ನಂಜಯ್ಯ | 01–12–1955 | 21–02–1984 | 25–09–2009 |
| 23. | ಡಿ.ಕೆ.ಕುಲಕರ್ಣಿ | 01–06–1951 | 24–09–1973 | 23–09–2009 |
| 24. | ಎಂ.ಬಸವರಾಜು | 01–01–1953 | 03–02–1981 | 16–09–2009 |
| 25. | ಟಿ.ವೆಂಕಟರಮಣಯ್ಯ | 18–08–1955 | 20–11–1981 | 17–09–2009 |
| 26. | ಆರ್.ವಿ. ವೈದ್ಯ | 05–09–1950 | 15–04–1974 | 24–09–2009 |
| 27. | ವೈ.ಡಿ. ಉಳ್ಳಿಕಾಶಿ | 01–06–1951 | 26–11–1971 | 16–09–2009 |
| 28. | ಹೆಚ್.ಬಿ.ಹವಳಾನಾಯಕ್ | 22–03–1957 | 16–11–1976 | 14–12–2009 |
| 29. | ಯು.ಹೆಚ್.ನಾಡಗೌಡ | 01–06–1952 | 01–05–1974 | 16–09–2009 |

| | | | | |
|---|---|---|---|---|
| 30. | ಕೆ.ನರಸಿಂಹಮೂರ್ತಿ | 01–05–1952 | 22–11–1971 | 23–09–2009 |
| 31. | ಪಿ.ಶ್ರೀನಿವಾಸರಾವ್ | 10–10–1950 | 11–04–1977 | 16–10–2009 |
| 32. | ಎಲ್.ಎನ್.ತಮದಡ್ಡಿ | 10–01–1951 | 03–09–1975 | 08–10–2009 |
| 33. | ಬಿ.ರಾಜಾಸುರೇಂದ್ರ | 10–11–1951 | 06–09–1975 | 16–09–2009 |
| 34. | ಎಂ.ತ್ಯಾಗರಾಜ್ಞ | 09–11–1954 | 14–04–1977 | 23–09–2009 |
| 35. | ಜೆ.ಎಸ್.ಶ್ರೀಕಂಠರಾವ್ | 05–06–1953 | 11–04–1977 | 25–09–2009 |
| 36. | ಹೆಚ್.ವೈ.ಯಡಿಹಳ್ಳಿ | 01–05–1955 | 12–03–1977<br>11–01–1984 | 17–09–2009 |
| 37. | ದೇವೇಂದ್ರಪ್ಪ ಜಿ.ಬಬ್ಲಿ | 02–03–1956 | 18–06–1979 | 09–10–2009 |
| 38. | ಎಲ್.ಅಂತೋಣಿರಾಜ್ | 13–08–1955 | 18–04–1984 | 16–09–2009 |
| 39. | ಡಿ.ತುಳಸೀದಾಸ್ | 30–04–1953 | 13–10–1977 | 16–09–2009 |
| 40. | ಸಿ.ದಾಸಪ್ಪ | 21–04–1951 | 25–04–1985 | 15–12–2009 |
| 41. | ಡಿ.ಕೆಂಪಯ್ಯ | 06–02–1951 | 22–05–1978 | 10–09–2009 |
| 42. | ಸಿ.ಆರ್.ಅರವಿಂದ್ | 05–03–1952 | 11–03–1977<br>ಅಪರಾಹ್ನ | 01–10–2009 |
| 43. | ಸಿ.ಎ.ಸಾಲೋಟಗಿ | 15–03–1953 | 16–04–1977 | 23–09–2009 |
| 44. | ಟಿ.ಆರ್.ಶಿವಪ್ರಸಾದ್ | 30–10–1955 | 04–03–1977 | 01–10–2009 |
| 45. | ಸಿ.ಜಿ.ವಸುಂದರದೇವಿ | 02–08–1956 | 01–04–1977 | 24–09–2009 |
| 46. | ಎ.ಎಂ.ಶ್ರೀನಿವಾಸ | 22–05–1955 | 28–10–1977 | 21–10–2009 |
| 47. | ಎಲ್.ಕರಿಯಪ್ಪ | 12–08–1951 | 06–06–1975 | 17–09–2009 |
| 48. | ಜಯಶಂಕರ | 10–08–1954 | 24–04–1985 | 16–09–2009 |
| 49. | ಕನಕರಾಜ ಡಿ | 15–06–1972 | 03–05–2006 | 26–10–2009 |
| 50. | ರಘು ಜಿ.ಪಿ | 02–10–1970 | 29–04–2006 | 16–10–2009 |

**ಎನ್. ಶ್ರೀನಿವಾಸ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

ಪಿ.ಆರ್. 2579

## ಇಂಧನ ಸಚಿವಾಲಯ

**ವಿಷಯ :** ಮೆ॥ ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರ 1.475 ಮೇಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗೆ ಕಾಲಾವಕಾಶ ವಿಸ್ತರಣೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 378 ಎನ್‌ಸಿಇ 2004 ದಿನಾಂಕ: 21.12.2004.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 220 ಎನ್‌ಸಿಇ 2006 ದಿನಾಂಕ: 23.06.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 181 ಎನ್‌ಸಿಇ 2007 ದಿನಾಂಕ: 16.05.2007.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಪತ್ರ ಸಂಖ್ಯೆ: ಕೆಆರ್‌ಇಡಿ/06/ಅಗ್ರಹಾರ ಎಂಹೆಚ್‌ಎಸ್/2010/1283 ದಿನಾಂಕ: 13/15.05.2010.
5) ದಿನಾಂಕ: 07.08.2010ರಂದು ನಡೆದ ನಿರೂಪಣೆ ಕುರಿತ ಸಭೆಯ ನಡವಳಿಗಳು

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅಗ್ರಹಾರ ಗ್ರಾಮದ ಬಳಿ ಎನ್.ಆರ್.ಬಿ.ಸಿ. ಡಿಸ್ಟ್ರಿಬ್ಯೂಟರಿ ಸಂಖ್ಯೆ: 18ಕ್ಕೆ ಅಡ್ಡಲಾಗಿ 1.3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸಾಮರ್ಥ್ಯವನ್ನು 1.3 ಮೆಗಾ ವ್ಯಾಟ್‌ನಿಂದ 1.475 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ॥ ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ॥ ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾವಣೆ ಮಾಡಿ 1.475 ಮೆಗಾ ವ್ಯಾಟ್ ಸಾಮರ್ಥ್ಯದ ಅಗ್ರಹಾರ ಕಿರು ಜಲ ವಿದ್ಯುತ್ ಯೋಜನೆಯನ್ನು [(chainage 4.5 km to 6.5 km (925 KW) and Chainage 11.5km to 13.5km (550 KW)] ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರ 1.475 ಮೆಗಾ ವ್ಯಾಟ್ ಸಾಮರ್ಥ್ಯದ ಅಗ್ರಹಾರ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ಅವಧಿಯು ದಿನಾಂಕ: 28.05.2010ಕ್ಕೆ ಕೊನೆಗೊಂಡಿದ್ದು, ಸ್ಥಳೀಯರ ವಿರೋಧವಿದುದ್ದರಿಂದ ಯೋಜನೆಗೆ ಬೇಕಾಗಿರುವ ಭೂಮಿಯನ್ನು ಪಡೆಯಲು ವಿಳಂಬವಾಗಿರುತ್ತದೆ. ಈ ಯೋಜನೆಯನ್ನು ಜುಲೈ 2011ರೊಳಗಾಗಿ ಪ್ರಾರಂಭಿಸಲಾಗುವುದೆಂದು ಹಾಗೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ

ಅಭಿವೃದ್ಧಿದಾರರು ಸಾಕಷ್ಟು ಪ್ರಗತಿ ಸಾಧಿಸಿದ್ದಾರೆಂದು ತಿಳಿಸಿ, ದಿನಾಂಕ: 29.05.2010 ರಿಂದ 28.05.2012ರವರೆಗೆ ಕಾಲಾವಕಾಶ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಸಭೆಯಲ್ಲಿ ಈ ಪ್ರಸ್ತಾವನೆ ಬಗ್ಗೆ ಅಭಿವೃದ್ಧಿದಾರರು ನಿರೂಪಣೆಯನ್ನು ನೀಡಿದ್ದು, ಜುಲೈ 2011ರೊಳಗಾಗಿ ಯೋಜನೆಯನ್ನು ಪ್ರಾರಂಭಿಸಲಾಗುವುದೆಂದು ತಿಳಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 233 ಎನ್‌ಸಿಇ 2010, ಬೆಂಗಳೂರು, ದಿನಾಂಕ : 28.09.2010.**

ಮೆ॥ ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಅಗ್ರಹಾರ ಗ್ರಾಮದ ಬಳಿ ಎನ್.ಆರ್.ಬಿ.ಸಿ. ಡ್ರಿಸ್ಟ್ರಿಬ್ಯೂಟರಿ ಸಂಖ್ಯೆ: 18ಕ್ಕೆ ಅಡ್ಡಲಾಗಿ ಹಂಚಿಕೆಯಾಗಿರುವ 1.475 ಮೆಗಾ ವ್ಯಾಟ್ ಸಾಮರ್ಥ್ಯದ ಅಗ್ರಹಾರ ಕಿರು ಜಲ ವಿದ್ಯುತ್ ಯೋಜನೆಯನ್ನು [(chainage 4.5 km to 6.5 km (925 KW) and Chainage 11.5km to 13.5km (550 KW)] ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ: 29.05.2010 ರಿಂದ 28.05.2012ರ ಅವಧಿಗೆ ವಿಸ್ತರಿಸಲಾಗಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 2580

## ENERGY SECRETARIAT

**Sub :** Enhancement of capacity of wind power project from 6.93 MW to 8.00 MW in favour of M/s J.N. Investments & Trading Co. Pvt. Ltd.-reg.

**Read :** 1. Government Order No: DE 41 NCE 2006 dated: 20.04.2006.
2. Letter No. KRED/08/J.N.I (6.93 to 8.00)-EIL/ 2010/2715 dated: 23/24.09.2010 received from the Managing Director, Karnataka Renewable Energy Development Limited, Bangalore.

**PREAMBLE :**

In the Government Order read at (1) above, permission has been accorded for implementation of 84.84 MW capacity Wind Power Project at Dharwad and Gadag Districts to M/s J.N. Investments & Trading Co. Pvt. Ltd.

The Managing Director, Karnataka Renewable Energy Development Limited, Bangalore vide his letter read at (2) above has recommended to Government to enhance the wind power capacity from 6.93 MW (part capacity of 84.84 MW) to 8.00 MW at Adavisomapura, Kalasapura, Malasamudra villages of Gadag District in favour of M/s J.N. Investments & Trading Co. Pvt. Ltd.

The proposal has been examined in detail and issued following Orders:

**Government Order No : EN 400 NCE 2010 (1), Bangalore, Dated : 27.09.2010.**

Government accords approval for enhancement of wind power capacity from 6.93 MW (part capacity of 84.84 MW) to 8.00 MW at Adavisomapura, Kalasapura, Malasamudra villages of Gadag District in favour of M/s J.N. Investments & Trading Co. Pvt. Ltd. as detailed below:

| Geographical Area details | Villages and District | Sanctioned capacity in MW | Enhancement proposed in Satage-1 | No.of WTGs& rating in kW |
|---|---|---|---|---|
| The proposed area is located on the North-East of Betgeri and South of Gadag. This area is spread around Nagasamudra and Adavi Somapura and has several peraks. It is held by the following Geographical co-ordinates: Latitude: $15^0$ 21' 7"- $15^0$24' 27"N Longitude: $75^0$ 36' 30"-$75^0$ 41' 2"E Peaks: 673, 702, 747, 717, 709, 678.3 m AMSL. Toposheet No: 48 M/11 | Adavisomapura, Kalasapura, Malasamudra Villages, Gadag District | 6.93 (21 x 330) | 1.07 | 8 MW (10 x 800) |

The Government has reserved the right to Cancel / modify this Order.

The other terms and conditions of the allotment Order read at (1) above shall continue as it is.

By order and in the name of the Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 2582

## ENERGY SECRETARIAT

**Sub :** Transfer of 6.4 MW wind power capacity in favour of M/s Vish Wind Infrastructure LLP-reg.

**Read :** 1. Government Order No: DE 41 NCE 2006 dated 20.04.2006.
2. Government Order No: EN 400 NCE 2010 (1) dated: 27.09.2010.
3. Letter No. KRED/08/J.N.I (6.93 to 8.00)-EIL/ 2010/2715 dated: 23/24.09.2010 received from the Managing Director, Karnataka Renewable Energy Development Limited, Bangalore.

**PREAMBLE :**

In the Government Order read at (1) above, permission has been accorded for implementation of 84.84 MW capacity Wind Power Project at Dharwad and Gadag Districts to M/s J.N. Investments & Trading Co. Pvt. Ltd.

In the Government order read at (2) above, sanction has been accorded for enhancement of wind power capacity from 6.93 MW (part capacity of 84.84 MW) to 8.00 MW at Adavisomapura, Kalasapura, Malasamudra villages of Gadag District in favour of M/s J.N. Investments & Trading Co. Pvt. Ltd.

In the letter read at (3) above, the Managing Director, Karnataka Renewable Energy Development Limited, Bangalore has recommended to the Government for transfer of 6.4 MW wind power capacity in favour of M/s Vish Wind Infrastruture LLP from out of the enhanced capacity 8.00 MW of M/s J.N. Investments & Trading Co. Pvt. Ltd. at Kalasapura village, Gadag District.

The proposal has been examined in detail and issued following Orders:

**Government Order No : EN 400 NCE 2010 (2), Bangalore, Dated : 27.09.2010.**

Government accords approval for transfer of 6.4 MW wind power capacity in favour of M/s Vish Wind Infrastructure LLP from out of the enhanced capacity 8.00 MW of M/s J.N. Investments & Trading Co. Pvt. Ltd. at Kalasapura village, Gadag District as detailed below and subject to the following conditions:

| Village Name | District | Transferred capacity | LOC No. |
|---|---|---|---|
| Kalasapura | Gadag | 6.4 MW | LOC-01, LOC-02, LCO-03, LOC-04, LOC-08, LOC-9, LOC-10, LOC-11. |

1. M/s Vish Wind Infrastructure LLP shall execute an agreement with Government within 45 (forty five) days from the date if issue of this Order.
2. **PPA** is assigned to BESCOM. BESCOM shall execute the PPA With M/s Vish Wind Infrastructure LLP withina a period of one month.
3. Karnataka Power Transmission Corporation Limited to accord power evacuation and grid synchozation approvals.
4. The Government reserves the right to Cancel/modify this Order.

The other terms and conditions of the Government Order read at (1) above shall **IPSO FACTO** applicable.

By order and in the name of the Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 2583

## ENERGY SECRETARIAT

**Sub :** Transfer of 1.6 MW wind power capacity in favour of M/s Protectron Electromech (P) Ltd.-reg.

**Read :** 1. Government Order No: DE 41 NCE 2006 dated 20.04.2006.
2. Government Order No: EN 400 NCE 2010 (1) dated: 27.09.2010.
3. Letter No. KRED/08/J.N.I (6.93 to 8.00) - EIL/2010/2715 dated: 23/24.09.2010 received from the Managing Director, Karnataka Renewable Energy Development Limited, Bangalore.

**PREAMBLE :**

In the Government Order read at (1) above, permission has been accorded for implementation of 84.84 MW calcity Wind Power Project at Dharwad and Gadag Districts to M/s J.N. Investments & Trading Co. Pvt. Ltd.

In the Government order read at (2) above, sanction has been accorded for enhancement of wind power capacity from 6.93 MW (part capacity of 84.84 MW) to 8.00 MW at Adavisomapura, Kalasapura, Malasamudra villages of Gadag District in favour of M/s J.N. Investments & Trading Co. Pvt. Ltd.

In the letter read at (3) above, the Managing Director, Karnataka Renewable Energy Development Limited, Bangalore has recommended to the Government for transfer of 1.6 MW wind power capacity in favour of M/s Protectron Electromech (P) Ltd. from out of the enhanced capacity 8.00 MW of M/s J.N. Investments & Trading Co. Pvt. Ltd. at Adavisomapura village, Gadag District.

The proposal has been examined in detail and issued following Orders:

**Government Order No : EN 400 NCE 2010 (3), Bangalore, Dated : 27.09.2010.**

Government accords approval for transfer of 1.6 MW wind power capacity in favour of M/s Protectron Electromech (P) Ltd. from out of the enhanced capacity 8.00 MW of M/s J.N. Investments & Trading Co. Pvt. Ltd. at Adavisomapura village, Gadag District as detailed below and subject to the following conditions:

| Village Name | District | Transferred capacity | LOC No. |
|---|---|---|---|
| Adavisomapura | Gadag | 1.6 MW | LOC-16, LOC-17. |

1. M/s Protectron Electromech (P) Ltd. Shall execute an agreement with Government within 45 (forty five) days from the date if issue of this Order.
2. **PPA** is assigned to BESCOM. BESCOM shall execute the PPA M/s Protectron Electromech (P) Ltd. withina a period of one month.
3. Karnataka Power Transmission Corporation Limited to accord power evacuation and grid synchronization approvals.
4. The Government reserves the right to Cancel/modify this Order.

The other terms and conditions of the Government Order read at (1) above shall **IPSO FACTO** applicable.

By order and in the name of Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 2584

## INFORMATION TECHNOLOGY, BIO-TECHNOLOGY SCIENCE & TECHNOLOGY SECRETARIAT

**Sub :** Re-constitution of Vision Group on Nano-technology.

**Government order No. DST 156 STS 2007 dated 30.09.2010**

### Corrgendium

In Government order No.DST 156 STS 2007 dated: 18.8.2010 the following substituted as against the names mentioned below:-

| S.No. | | |
|---|---|---|
| O5 | **Prof.G.D.Yadav**<br>Dean,<br>Research, Consultance and Resource Mobilization,<br>Head, Department of Chemical Engineering,<br>University Institute of Chemical Technology (UICT),<br>University of Mumbai, Matunga,<br>MUMBAI – 400 019.<br>Phone: 022-24145616/19/26/29/31<br>Fax: 022-24145614<br>E-mail: gdy@udct.org/gdyadav @udct.org | **Prof.G.D.Yadav**<br>Director (Vice Chancellor) and<br>R.T.Mody Distinguished Professor<br>J.C.Bose National Fellow (DST-Govt of India)<br>Institute of Chemical Technology,<br>(University under Section-3 of UGC Act-1956),<br>Matunga,<br>Mumbai – 400 019.<br>Phone: 33611001<br>Mob: 9833090510<br>Fax: 3361-1002/1020<br>E-mail:gd.yadav@ictmumbai,edu.in,<br>director@ictmumbai,edu.in |
| 11 | **Dr. R.K.Malhotra**<br>Executive Director (R & D)<br>Indian Oil Corporation Limited<br>Research & Development Centre,<br>Sector-13, Fairadabad – 121 007<br>Harayana.<br>Tel No. 0129-2283710<br>Fax No. 0129-2283711<br>E-mail:<br>mlhotrak@iocrd.co.in/malhotrark@iocl.co.in | **Dr. R.K.Malhotra**<br>Director (R & D)<br>Indian Oil Corporation Limited<br>Research & Development Centre,<br>Sector-13, Fairadabad – 121 007<br>Harayana.<br>Tel No. 0129-2283710<br>Fax No. 0129-2283711<br>E-mail:<br>mlhotrark@iocrd.co.in/malhotrark@iocl.co.in |

By order and in the name of the Governor of Karnataka,
**K.Boralingaiah**
Under Secretary to Government,
Department of Information Technology,
Bio-Technology, Science & Technology.

P.R. 2586

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್ ಬಸಪ್ಪ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ವಿಶೇಷ ಅಧಿಕಾರಿ ಶ್ರೀ ನರಸಿಂಹಯ್ಯ, ಹಿಂದಿನ ಅಧೀಕ್ಷಕ, ಶ್ರೀಮತಿ ಗ್ರೇಸ್ ಪದ್ಮಿನಿ, ಹಿಂದಿನ ವ್ಯವಸ್ಥಾಪಕರು (ವಸತಿ), ಶ್ರೀಮತಿ ಕೆ.ವಿ. ಪದ್ಮಿನಿ, ವ್ಯವಸ್ಥಾಪಕರು (ವಸತಿ), ರಾಜ್ಯ ಅತಿಥೇಯ ಸಂಸ್ಥೆ, ಕುಮಾರ ಕೃಪ ಅತಿಥಿ ಗೃಹ, ಬೆಂಗಳೂರು- ಇವರುಗಳ ವಿರುದ್ಧ ಜಂಟೀ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1) ದಿನಾಂಕ: 07-04-10 ರ ಕಾರಣ ಕೇಳುವ ನೋಟೀಸು ಸಂಖ್ಯೆ : ಸಿಆಸುಇ 060 ಕೆಇವಿ 07
2) ಶ್ರೀ ಎಸ್ ಬಸಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಇವರ ದಿನಂಕ: 12-05-10 ರ ಉತ್ತರ
3) ಶ್ರೀ ನರಸಿಂಹಯ್ಯ, ಹಿಂದಿನ ಅಧೀಕ್ಷಕ ಇವರ ದಿನಾಂಕ: 10-05-10 ರ ಉತ್ತರ
4) ಶ್ರೀಮತಿ ಗ್ರೇಸ್ ಪದ್ಮಿನಿ, ಹಿಂದಿನ ವ್ಯವಸ್ಥಾಪಕರು (ವಸತಿ) ಇವರ ದಿನಾಂಕ: 13-05-10ರ ಉತ್ತರ
5) ಶ್ರೀಮತಿ ಕೆ.ವಿ. ಪದ್ಮಿನಿ, ವ್ಯವಸ್ಥಾಪಕರು (ವಸತಿ) ಇವರ ದಿನಾಂಕ : 12-05-10 ರ ಉತ್ತರ

**ಪ್ರಸ್ತಾವನೆ :**

ಶ್ರೀ ಎಸ್ ಬಸಪ್ಪ, ಕೆಎಎಸ್ (ಕಿರಿಯ ಶ್ರೇಣಿ), ಇವರು ರಾಜ್ಯ ಅತಿಥೇಯ ಸಂಸ್ಥೆ, ಕುಮಾರ ಕೃಪ ಅತಿಥಿ ಗೃಹ, ಬೆಂಗಳೂರು ಇಲ್ಲಿ ವಿಶೇಷ ಅಧಿಕಾರಿ ಹುದ್ದೆಯಲ್ಲಿ, ಶ್ರೀ ನರಸಿಂಹಯ್ಯ ಇವರು ಅಧೀಕ್ಷಕ (ನಿವೃತ್ತ) ಹುದ್ದೆಯಲ್ಲಿ, ಶ್ರೀಮತಿ ಗ್ರೇಸ್ ಪದ್ಮಿನಿ ಇವರು ವ್ಯವಸ್ಥಾಪಕರು (ವಸತಿ)(ನಿವೃತ್ತ) ಹುದ್ದೆಯಲ್ಲಿ ಮತ್ತು ಶ್ರೀಮತಿ ಕೆ ವಿ ಪದ್ಮಿನಿ, ವ್ಯವಸ್ಥಾಪಕರು (ವಸತಿ) ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, 01-04-02 ರಿಂದ 31-12-05 ರ ಅವಧಿಯಲ್ಲಿ ಸರ್ಕಾರಿ ವಸತಿ ಗೃಹಗಳಾದ ಕುಮಾರ ಕೃಪ ಅತಿಥಿ ಗೃಹ ಹಾಗೂ ಬಾಲಬ್ರೂಯಿ ಅತಿಥಿ ಗೃಹಗಳಲ್ಲಿ ರಾಜ್ಯ ಅತಿಥಿಗಳಿಗೆ ವಸತಿ ಸೌಕರ್ಯ ಒದಗಿಸಲು ಸಾಕಷ್ಟು ವಸತಿ ಕೊಠಡಿಗಳು ಲಭ್ಯವಿದ್ದರೂ, ನಿಯಮಗಳನ್ನು ಉಲ್ಲಂಘಿಸಿ ಬೆಂಗಳೂರಿನ ಗ್ರ್ಯಾಂಡ್ ಅಶೋಕಾ ಹೋಟಲಿನಲ್ಲಿ ವಸತಿ ಸೌಕರ್ಯ ಏರ್ಪಡಿಸಿರುವ ವಿಚಾರವು ಲೆಕ್ಕಪತ್ರ ಪರಿಶೋಧನಾ ವರದಿಯಲ್ಲಿ ಕಂಡುಬಂದಿದ್ದು, ಇದರಿಂದಾಗಿ, ಸರ್ಕಾರಕ್ಕೆ ಒಟ್ಟು ರೂ. 12383986-00 ಗಳ ಅನಗತ್ಯ ವೆಚ್ಚವಾಗಿರುವ ಆಕ್ಷೇಪಣೆಯಾಗಿದ್ದು, ಅದೇ ರೀತಿ ಕುಮಾರ ಕೃಪ ಅತಿಥಿ ಗೃಹದ 2002-03 ರಿಂದ 2004-05 ನೇ ಸಾಲಿನ ಮಹಾಲೇಖಾಪಾಲರ ತಪಾಸಣಾ ವರದಿಯಲ್ಲಿ ಸರ್ಕಾರದ ಮಾರ್ಗಸೂಚಿಯನ್ನು ಉಲ್ಲಂಘಿಸಿ, ತಾರಾ ಹೋಟಲುಗಳಲ್ಲಿ ವಸತಿ ಸೌಕರ್ಯಗಳನ್ನು ಏರ್ಪಡಿಸಿದ ಕಾರಣ, ಸರ್ಕಾರಕ್ಕೆ ಒಟ್ಟು ರೂ. 100.80 ಲಕ್ಷಗಳ ಅನಗತ್ಯ ವೆಚ್ಚವಾಗಿರುವ ಆಕ್ಷೇಪಣೆಯಾಗಿರುತ್ತದೆ. ವಾಸ್ತವವಾಗಿ ಕುಮಾರ ಕೃಪ ಮತ್ತು ಬಾಲಬ್ರೂಯಿ ಅತಿಥಿ ಗೃಹಗಳಲ್ಲಿ ಸಾಕಷ್ಟು ಕೊಠಡಿಗಳು ಲಭ್ಯವಿದ್ದಾಗ್ಯೂ ರಾಜ್ಯ ಅತಿಥಿಗಳಿಗೆ ಗ್ರ್ಯಾಂಡ್ ಅಶೋಕಾ ಹೋಟೆಲಿನಲ್ಲಿ ವಸತಿ ಸೌಕರ್ಯ ಏರ್ಪಡಿಸುವ ಮೂಲಕ ಸರ್ಕಾರದ ಬೊಕ್ಕಸಕ್ಕೆ ಒಟ್ಟು ರೂ. 1255870-00ಗಳ ಅನಗತ್ಯ ವೆಚ್ಚವಾಗಲು ಇವರುಗಳು ಜವಾಬ್ದಾರರಾಗಿದ್ದು, ಇದು ಕರ್ನಾಟಕ ಆರ್ಥಿಕ ಸಂಹಿತೆಯ 15 ನೇ ಪರಿಚ್ಛೇದದಲ್ಲಿನ ಕಾರ್ಯವಿಧಾನಕ್ಕೆ ವ್ಯತಿರಿಕ್ತವಾಗಿ ನಡೆದುಕೊಳ್ಳುವ ಮೂಲಕ ದುರ್ನಡತೆ ಎಸಗಿರುವ ಆರೋಪದ ಸಂಬಂಧ ಇವರುಗಳಿಗೆ ಮೇಲಿನ ಕ್ರಮ ಸಂಖ್ಯೆ (1) ರಂತೆ ಕಾರಣ ಕೇಳುವ ನೋಟೀಸು ಜಾರಿ ಮಾಡುವ ಮೂಲಕ ಇವರುಗಳ ವಿರುದ್ಧ ಶಿಸ್ತು ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಮೇಲಿನ ಕ್ರಮ ಸಂಖ್ಯೆ (2) ರಿಂದ (5) ರಲ್ಲಿ ಆರೋಪಿತ ಅಧಿಕಾರಿಗಳು ಕಾರಣ ಕೇಳುವ ನೋಟೀಸಿಗೆ ಸಲ್ಲಿಸಿದ ಉತ್ತರಗಳಲ್ಲಿ, ಇವರುಗಳ ಮೇಲೆ ಹೊರಿಸಲಾದ ಆರೋಪವನ್ನು ನಿರಾಕರಿಸಿರುವ ಕಾರಣ, ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 060 ಕೆಇವಿ 07, ಬೆಂಗಳೂರು, ದಿನಾಂಕ : 5ನೇ ಅಕ್ಟೋಬರ್, 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 13ನ್ನು ಓದಿಕೊಂಡಂತೆ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಕೆಳಕಂಡ ಆರೋಪಿತರ ವಿರುದ್ಧ ಮಾಡಲಾದ ಆರೋಪಗಳ ಕುರಿತಂತೆ ಜಂಟಿ ವಿಚಾರಣೆ ನಡೆಸಲು ಅಪರ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರುರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

1. ಶ್ರೀ ಎಸ್ ಬಸಪ್ಪ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ವಿಶೇಷ ಅಧಿಕಾರಿ, ರಾಜು ಅತಿಥೇಯ ಸಂಸ್ಥೆ, ಕುಮಾರ ಕೃಪ ಅತಿಥಿ ಗೃಹ, ಬೆಂಗಳೂರು ಹಾಲಿ ಸಹಾಯಕ ಆಯುಕ್ತರು (ಪುನರ್ವಸತಿ), ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು
2. ಶ್ರೀ ನರಸಿಂಹಯ್ಯ, ನಿವೃತ್ತ ಅಧೀಕ್ಷಕರು, ರಾಜ್ಯ ಅತಿಥೇಯ ಸಂಸ್ಥೆ, ಕುಮಾರ ಕೃಪ ಅತಿಥಿ ಗೃಹ, ಬೆಂಗಳೂರು
3. ಶ್ರೀಮತಿ ಗ್ರೇಸ್ ಪದ್ಮಿನಿ, ನಿವೃತ್ತ ವ್ಯವಸ್ಥಾಪಕರು (ವಸತಿ), ರಾಜ್ಯ ಅತಿಥೇಯ ಸಂಸ್ಥೆ, ಕುಮಾರ ಕೃಪ ಅತಿಥಿ ಗೃಹ, ಬೆಂಗಳೂರು
4. ಶ್ರೀಮತಿ ಕೆ ವಿ ಪದ್ಮಿನಿ, ವ್ಯವಸ್ಥಾಪಕರು (ವಸತಿ), ರಾಜ್ಯ ಅತಿಥೇಯ ಸಂಸ್ಥೆ, ಕುಮಾರ ಕೃಪ ಅತಿಥಿ ಗೃಹ, ಬೆಂಗಳೂರು

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಸಹಾಯಕ ನಿರ್ದೇಶಕರು (ಆಡಳಿತ), ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣೆಯನ್ನು ಆದಷ್ಟು ತ್ವರಿತವಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು-2)

ಪಿ.ಆರ್. 2587

## ವಸತಿ ಸಚಿವಾಲಯ

**ವಿಷಯ :** ಬಂಟ್ವಾಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1999, ದಿನಾಂಕ: 10.05.2000.

(2) ಸರ್ಕಾರದ ಆದೇಶ ಸಂ.ವಇ /18/ಹೆಚ್ಎಎಸ್/2008, ದಿನಾಂಕ: 16.09.2009.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2) ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಬಂಟ್ವಾಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ : ವಇ 96 ಹೆಚ್ಎಎಸ್ 2010, ಬೆಂಗಳೂರು, ದಿನಾಂಕ : 28ನೇ ಸೆಪ್ಟೆಂಬರ್ 2010**

ಬಂಟ್ವಾಳ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ರಮಾನಂದ ಪೈ ಬಿನ್ ಗಣಪತಿ ಪೈ, ಬಿಷಪ್ ಕಾಂಪೌಂಡ್, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ | ಸಾಮಾನ್ಯ |
| 2 | ಶ್ರೀ ಕೆ.ದಯಾನಂದ ಬಿ. ಮೇಘ ಸ್ಟುಡಿಯೋ, ಕಾಲೇಜು ರಸ್ತೆ, ಬಂಟ್ವಾಳ | ಹಿಂದುಳಿದ ವರ್ಗ |
| 3 | ಶ್ರೀ ಕೇಶವ ದೈಪಲ ಬಿನ್ ಚಂದ್ರಪ್ಪ ನಾಯ್ಕ, ದೈಪಲ ಮನೆ, ಬಿ. ಮೂಡ ಗ್ರಾಮ, ಜೋಡುಮಾರ್ಗ ಅಂಚೆ, ಬಂಟ್ವಾಳ ತಾಲ್ಲೂಕು. | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಕೌಸರ್ ಕೋಂ ಅಬ್ದುಲ್ ರಜಾಕ್, ಪರ್ಲಿಯಾ ಮನೆ, ಬಿ. ಮೂಡ ಗ್ರಾಮ, ಜೋಡುಮಾರ್ಗ ಅಂಚೆ, ಬಂಟ್ವಾಳ ತಾಲ್ಲೂಕು. | ಅಲ್ಪಸಂಖ್ಯಾತರು (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ-2 ವಸತಿ ಇಲಾಖೆ.

ಪಿ.ಆರ್. 2588

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಕೆ.ಪಾಟೀಲ್, ಡೆಪ್ಯುಟಿ ಕಮಾಂಡೆಂಟ್, ಗೃಹರಕ್ಷಕ ದಳ ಇವರ ಇಲಾಖಾ ನಿವಾರಣೆ ಇಲಾಖಾ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ : ಒಇ 110 ಕಗ್ರಸೇ 2002 ದಿನಾಂಕ: 03-08-2004.

2) ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಧೀಶರು, ರಾಯಚೂರು ಇವರ ಪತ್ರ ದಿನಾಂಕ: 28-10-2008.

3) ಮಹಾಸಮಾದೇಷ್ಟರು, ಗೃಹರಕ್ಷಕದಳ ಇವರ ಪತ್ರ ಸಂಖ್ಯೆ: ಸಿಬ್ಬಂದಿ(1) 79/ಸಿಜಿಓ/ 2000-01, ದಿನಾಂಕ" 24-9-2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಬಿ.ಕೆ.ಪಾಟೀಲ್, ಉಪಸಮಾದೇಷ್ಟರು, ಗೃಹರಕ್ಷಕ ದಳ ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ರಾಯಚೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ, 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಾಯಕ ಆಡಳಿತ ಅಧಿಕಾರಿ, ಗೃಹರಕ್ಷಕ ದಳ ಇಲಾಖೆ, ಬೆಂಗಳೂರು ಕೇಂದ್ರ ಸ್ಥಾನ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕುಲಕರ್ಣಿ ರಾಮರಾವ್‌ರವರು ಸರ್ಕಾರಕ್ಕೆ ಪತ್ರ ಬರೆದು ತಮ್ಮ ಅನಾರೋಗ್ಯದ ಕಾರಣ ಅಂತಿಮ ವಿಚಾರಣೆ ವರದಿಯನ್ನು ಕೊಡಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿದ ಹಿನ್ನಲೆಯಲ್ಲಿ ಸರ್ಕಾರವು ಬೇರೊಬ್ಬರನ್ನು ವಿಚಾಣಾಧಿಕಾರಿಯನ್ನಾಗಿ ನೇಮಿಸಲು ತಿರ್ಮಾನಿಸಿ ನಿವೃತ್ತ ನ್ಯಾಯಾಧೀಶರ ಹೆಸರು ಮತ್ತು ವಿಚಾರಣಾಧಿಕಾರಿಯವರ ಪಟ್ಟಿಯನ್ನು ಸರ್ಕಾರಕ್ಕೆ ಕಳುಹಿಸುವಂತೆ ಪೋಲೀಸ್ ಆಯುಕ್ತರು, ಧಾರವಾಡ ಇವರನ್ನು ಕೋರಲಾಗಿತ್ತು. ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ವಿಚಾರಣಾ ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಒಪ್ಪಿಗೆಯನ್ನು ಸೂಚಿಸಿ ಮೂವರು ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಸರ್ಕಾರಕ್ಕೆ ಪತ್ರ ಬರೆದಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಬಿ.ಕೆ.ಪಾಟೀಲ್, ಡೆಪ್ಯುಟಿ ಕಮಾಂಡೆಂಟ್, ಗೃಹರಕ್ಷಕ ದಳ ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು ಈ ಹಿಂದೆ ಮಂಡನಾಧಿಕಾರಿಯಾಗಿ ನೇಮಕಗೊಂಡಿದ್ದ, ಸಹಾಯಕ ಆಡಳಿತಾಧಿಕಾರಿಗಳು, ಗೃಹರಕ್ಷಕ ಹಾಗೂ ಪೌರರಕ್ಷಣಾ ಕೇಂದ್ರ ಸ್ಥಾನ, ಬೆಂಗಳೂರು ಇವರಿಗೆ ಬದಲಾಗಿ ಸಹಾಯಕ ಆಡಳಿತಾಧಿಕಾರಿಗಳು, ಜಿಲ್ಲಾ ಗೃಹರಕ್ಷಕ ದಳ, ಮೈಸೂರು ಜಿಲ್ಲೆ, ಮೈಸೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತಿಳಿಸಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 110 ಕಗೃಸೇ 2002, ಬೆಂಗಳೂರು, ದಿನಾಂಕ: 05–10–2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಕೆ.ಪಾಟೀಲ್, ಉಪ ಸಮಾದೇಷ್ಟರು, (ನಿವೃತ್ತ) ಗೃಹರಕ್ಷಕದಳ ಇವರ ವಿರುದ್ಧದ ಆರೋಪಗಳ ಕುರಿತ ವಿಚಾರಣೆಯನ್ನು ಮುಂದುವರೆಸುವ ಸಲುವಾಗಿ ನಡೆಸುವ ಸಲುವಾಗಿ ಶ್ರೀ ಡಿ.ವಿ. ಶೇಟ್, ನಿವೃತ್ತ ನ್ಯಾಯಾಧೀಶರು, ಧಾರವಾಡ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಈ ವಿಚಾರಣೆಗಾಗಿ ಅವರಿಗೆ ಸರ್ಕಾರದ ಆದೇಶ ಸಂ: ಸಿಆಸುಇ 22 ಸೇಇವಿ 2007, ದಿನಾಂಕ: 11–04–2000 ರ ಪ್ರಕಾರ ರೂ. 8000–00(ಎಂಟು ಸಾವಿರ ರೂಗಳು ಮಾತ್ರ) ಗೌರವಧನ, ಹಾಗೂ ರೂ.1,500 (ಒಂದು ಸಾವಿರದ ಐದುನೂರು ರೂಗಳು ಮಾತ್ರ)ಗಳ ವಾಹನ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಾಯಕ ಆಡಳಿತಾಧಿಕಾರಿ, ಜಿಲ್ಲಾ ಗೃಹರಕ್ಷಕ ದಳ ಇಲಾಖೆ, ಮೈಸೂರು ಜಿಲ್ಲೆ, ಮೈಸೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ.

ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಶ್ರೀಘ್ರಲಿಪಿಗಾರ, ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಾಗ್ರಿಗಳನ್ನು ಒದಗಿಸಲು ಉಪ ಮಹಾಸಮಾದೇಷ್ಟರು, ಗೃಹರಕ್ಷಕ ದಳ ಇಲಾಖೆ, ಕೇಂದ್ರಸ್ಥಾನ, ಬೆಂಗಳೂರು ರವರು ಕ್ರಮ ಕೈಗೊಳ್ಳತಕ್ಕದ್ದು.

ವಿಚಾರಣೆಯನ್ನು ಶೀಘ್ರವಾಗಿ ಕೈಗೆತ್ತಿಕೊಂಡು 3 ತಿಂಗಳೊಳಗಾಗಿ ಕಡ್ಡಾಯವಾಗಿ ಮುಗಿಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2589 ಒಳಾಡಳಿತ ಇಲಾಖೆ,

(ಪೊಲೀಸ್ ಸಹಾಯಕ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಶೀಘ್ರಗತಿ ನ್ಯಾಯಾಲಯದ 30 ಸರ್ಕಾರಿ ಅಭಿಯೋಜಕರ ಹಾಗೂ ಜುಲೈ–2009ರ ನಂತರ ಸೃಜನೆಯಾದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ: ಒಇ 32 ಪಿಪಿಇ 2004, ದಿನಾಂಕ: 25.01.2005,
2. ಸರ್ಕಾರದ ಆದೇಶ ಸಂ: ಒಇ 118 ಪಿಪಿಇ 2008, ದಿನಾಂಕ: 05.08.2009,
3. ಸರ್ಕಾರದ ಆದೇಶ ಸಂ: ಒಇ 114 ಪಿಪಿಇ 2009, ದಿನಾಂಕ: 11.08.2009,
4. ಸರ್ಕಾರದ ಆದೇಶ ಸಂ: ಒಇ 123 ಪಿಪಿಇ 2009, ದಿನಾಂಕ: 25.09.2009,
5. ಸರ್ಕಾರದ ಆದೇಶ ಸಂ: ಒಇ 508 ಪಿಪಿಇ 2007, ದಿನಾಂಕ: 22.10.2009,
6. ಸರ್ಕಾರದ ಆದೇಶ ಸಂ: ಒಇ 346 ಪಿಪಿಇ 2009, ದಿನಾಂಕ: 16.02.2010,
7. ಸರ್ಕಾರದ ಆದೇಶ ಸಂ: ಒಇ 347 ಪಿಪಿಇ 2009, ದಿನಾಂಕ: 26.02.2010,
8. ಸರ್ಕಾರದ ತಿದ್ದುಪಡಿ ಆದೇಶ ಸಂ: ಒಇ 346 ಪಿಪಿಇ 2009, ದಿನಾಂಕ: 06.05.2010,
9. ಸರ್ಕಾರದ ಆದೇಶ ಸಂ: ಒಇ 169 ಎಲ್‌ಸಿಇ 2006, ದಿನಾಂಕ: 09.08.2010,
10. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ–1/216/2009–10, ದಿನಾಂಕ:06/12.07.2010 ಮತ್ತು 23.08.2010

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 25.01.2005ರ ಸರ್ಕಾರದ ಆದೇಶದನ್ವಯ ರಾಜ್ಯದ 30 ಶೀಘ್ರವಿಲೇವಾರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಸರ್ಕಾರಿ ಅಭಿಯೋಜಕರ 30 ಹುದ್ದೆಗಳನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ದಿನಾಂಕ: 12.11.2004 ರಿಂದ ಜಾರಿಗೆ ಬರುವಂತೆ ಸದರಿ ನ್ಯಾಯಾಲಯಗಳ ಕಾರ್ಯ ಮುಗಿಯುವರೆಗೆ ಅಥವಾ ಒಂದು ವರ್ಷದ ಅವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಸೃಜಿಸಲಾಗಿದ್ದು, ಮೇಲೆ (3) ರಲ್ಲಿ ಓದಲಾದ ದಿನಾಂಕ: 11.08.2009ರ ಆದೇಶದನ್ವಯ ಸದರಿ ಹುದ್ದೆಗಳನ್ನು ದಿನಾಂಕ: 31.03.2010ರ ವರೆಗೆ ಮುಂದುವರೆಸಲಾಗಿದೆ. ಮುಂದುವರೆದು, ಮೇಲೆ (9)ರಲ್ಲಿ ಓದಲಾದ ದಿನಾಂಕ: 09.08.2010ರ ಸರ್ಕಾರದ ಆದೇಶದನ್ವಯ, ಸದರಿ 30 ಶೀಘ್ರವಿಲೇವಾರಿ ನ್ಯಾಯಾಲಯವನ್ನು 2010–11ನೇ ಸಾಲಿಗೆ ಮುಂದುವರೆಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 05.08.2009ರ ಸರ್ಕಾರದ ಆದೇಶದನ್ವಯ ಗುಬ್ಬಿಯ ಹೆಚ್ಚುವರಿ ಸಿವಿಲ್ ಜೆಡ್ಜ್(ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಒಂದು ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹಾಗೂ ಒಂದು ದ್ವಿತೀಯ ದರ್ಜೆ ಸಹಾಯಕರ (ಕಂಪ್ಯೂಟರ್ ಜ್ಞಾನ ಮತ್ತು ಬೆರಳಚ್ಚುಗಾರಿಕೆಯಲ್ಲಿ ನೈಪುಣ್ಯತೆ ಹೊಂದಿರುವ) ಬೆರಳಚ್ಚುಗಾರರಿಗೆ ಸರಿಸಮಾನಾದ ಹುದ್ದೆಯನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ: 25.09.2009ರ ಸರ್ಕಾರದ ಆದೇಶದನ್ವಯ ಬೀದರ್‌ನ ಎರಡನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಒಂದು ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರು, ಒಂದು ಬೆರಳಚ್ಚುಗಾರರ ಹಾಗೂ ಒಂದು ದಲಾಯತ್‌ರ ಹುದ್ದೆಯನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿನಾಂಕ: 22.10.2009ರ ಸರ್ಕಾರದ ಆದೇಶದಲ್ಲಿ ಚಿತ್ರದುರ್ಗ, ಶಿವಮೊಗ್ಗ, ರಾಯಚೂರು ಬಳ್ಳಾರಿ, ಮಂಡ್ಯ, ಹಾಸನ, ಚಿಕ್ಕಮಗಳೂರು ಮತ್ತು ಬೀದರ್‌ನ ಸರ್ಕಾರಿ ಅಭಿಯೋಜಕರ ಕಛೇರಿಗೆ ತಲಾ ಒಂದು ಹುದ್ದೆಯಂತೆ ಒಟ್ಟು 8 ಅಧೀಕ್ಷಕರ ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ (6) ರಲ್ಲಿ ಓದಲಾದ ದಿನಾಂಕ: 16.01.2010ರ ಸರ್ಕಾರದ ಆದೇಶದನ್ವಯ 37 ರಿಂದ 44ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳು, ಬೆಂಗಳೂರು ನಗರ, 4ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಮಹಿಳೆಯರ ಮೇಲಿನ ದೌಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ(ವಿಶೇಷ ನ್ಯಾಯಾಲಯ), ಮೈಸೂರು, 5ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ವರದಕ್ಷಿಣೆ ಸಾವು ಅಪರಾಧ ಪ್ರಕರಣಗಳ ವಿಚಾರಣೆಗಾಗಿ (ವಿಶೇಷ ನ್ಯಾಯಾಲಯ), ಮೈಸೂರು, 1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಾವಣಗೆರೆ, 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ದಾವಣಗೆರೆ, 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ, 4ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಮಹಿಳೆಯರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ(ವಿಶೇಷ ನ್ಯಾಯಾಲಯ), ಬೆಳಗಾವಿ, 6ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ವರದಕ್ಷಿಣೆ ಸಾವು ಅಪರಾಧ ಪ್ರಕರಣಗಳ ವಿಚಾರಣೆಗಾಗಿ (ವಿಶೇಷ ನ್ಯಾಯಾಲಯ), ಬೆಳಗಾವಿ ಇವುಗಳಿಗೆ 15 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮುಂದುವರೆದು, ಮೇಲೆ (8)ರಲ್ಲಿ ಓದಲಾದ ದಿನಾಂಕ: 06.05.2010ರ ತಿದ್ದುಪಡಿ ಆದೇಶದನ್ವಯ 4ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಮಹಿಳೆಯರ ಮೇಲಿನ ದೌರ್ಜನ್ಯ ಅಪರಾಧ ಪ್ರಕರಣಗಳ ವಿಚಾರಣೆಗಾಗಿ(ವಿಶೇಷ ನ್ಯಾಯಾಲಯ), ಬೆಳಗಾವಿ ಎಂಬುದರಲ್ಲಿ 4ನೇ ಎಂದಿರುವುದನ್ನು 5ನೇ ಎಂದು ತಿದ್ದುಪಡಿ ಮಾಡಿ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ: 26.02.2010ರ ಸರ್ಕಾರದ ಆದೇಶದನ್ವಯ, ಬೆಂಗಳೂರಿನ 10(ಹತ್ತು) ಹೆಚ್ಚುವರಿ ಮುಖ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ(ಸಿವಿಲ್ ನ್ಯಾಯಾಧೀಶರು[ಹಿ.ವಿ] ಶ್ರೇಣಿ) ಗಳಿಗೆ ಹೊಂದಿಕೊಂಡಂತೆ 10 ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ, 10 ಬೆರಳಚ್ಚುಗಾರರ ಮತ್ತು 10 ದಲಾಯತ್ ರ ಹುದ್ದೆಗಳನ್ನು ಸದರಿ ನ್ಯಾಯಾಲಯಗಳು ಕಾರ್ಯಾರಂಭ ಮಾಡಿದ ದಿನಾಂಕದಿಂದ ಜಾರಿಗೆ ಬರುವಂತೆ, ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಿದೆ.

ಮೇಲೆ ಕ್ರಮ ಸಂಖ್ಯೆ(10)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 06/12.07.2010 ಮತ್ತು 23.08.2010ರ ಪತ್ರದಲ್ಲಿ, ಮೇಲೆ (1) ರಿಂದ (9)ರಲ್ಲಿ ಓದಲಾದ ಸರ್ಕಾರಿ ಆದೇಶಗಳ ಹಿನ್ನಲೆಯಲ್ಲಿ, 2010-11ನೇ ಸಾಲಿಗೆ ಮುಂದುವರೆಯ-ಲಿರುವ ಶೀಘ್ರವಿಲೇವಾರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ 30 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಮತ್ತು ಆಗಸ್ಟ್ - 2009 ಮತ್ತು ನಂತರದ ಅವಧಿಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜನೆಯಾದ ಹುದ್ದೆಗಳನ್ನು ಏಕರೂಪವಾಗಿ ದಿನಾಂಕ: 31.03.2011ರ ವರೆಗೆ ಮುಂದುವರೆಸಲು ಮಂಜೂರಾತಿಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 237 ಪಿಪಿಇ 2010, ಬೆಂಗಳೂರು, ದಿನಾಂಕ : 05ನೇ ಅಕ್ಟೋಬರ್ 2010.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಈ ಆದೇಶದ ಅನುಬಂಧದ ಅಂಕಣ (2) ರಲ್ಲಿ ನಮೂದಿಸಿರುವ ಪದನಾಮದ ಅಂಕಣ (3) ರಲ್ಲಿ ನಮೂದಿಸಿರುವ ಸಂಖ್ಯೆಯ ಒಟ್ಟು 89 ತಾತ್ಕಾಲಿಕ ಹುದ್ದೆಗಳನ್ನು ಅಂಕಣ (4) ರಲ್ಲಿ ತೋರಿಸಿರುವ ವಿವಿಧ ಕಛೇರಿಗಳಲ್ಲಿ ಏಕರೂಪವಾಗಿ ದಿನಾಂಕ: 01.04.2010 ರಿಂದ ಅಥವಾ ಒಂದು ವರ್ಷದ ಅವಧಿಯು ಪೂರ್ಣಗೊಂಡ ದಿನಾಂಕದಿಂದ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು ಕಾರ್ಯಾರಂಭ ಮಾಡಿದ ದಿನಾಂಕದಿಂದ ದಿನಾಂಕ: 31-03-2011 ರ ವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು ಮುಕ್ತಾಯಗೊಂಡ ದಿನಾಂಕದವರೆಗೆ ಇವೆರಡಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು 2014 ನ್ಯಾಯಪರಿಪಾಲನೆ -00-114 ಕಾನೂನು ಸಲಹೆಗಾರರು ಮತ್ತು ಸಮಾಪದೇಶಕರು -0-02-ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, 002-ಅಧಿಕಾರಿಗಳ ವೇತನ, 003-ಸಿಬ್ಬಂದಿ ವೇತನ ಈ ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ಸರ್ಕಾರದ ಆದೇಶ ಸಂಖ್ಯೆ: ಒಇ 237 ಪಿಪಿಇ 2010, ಬೆಂಗಳೂರು, ದಿನಾಂಕ: 05ನೇ ಸೆಪ್ಟೆಂಬರ್ 2010.**

**ಅನುಬಂಧ**

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಶೀಘ್ರಗತಿ ನ್ಯಾಯಾಲಯದ 30 ಸರ್ಕಾರಿ ಅಭಿಯೋಜಕರ ಹಾಗೂ ಜುಲೈ-2009ರ ನಂತರ ಸೃಜನೆಯಾದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಿರುವ ಬಗ್ಗೆ.**

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆ ಸಂಖ್ಯೆ | ಹುದ್ದೆ ಮಂಜೂರಾಗಿರುವ ಸ್ಥಳ | ಹುದ್ದೆಯ ಅವಧಿಯು ಮುಕ್ತಾಯಗೊಳ್ಳುವ ದಿನಾಂಕ |
|---|---|---|---|---|
| (1) | (2) | (3) | (4) | (5) |
| 1 | ಸರ್ಕಾರಿ ಅಭಿಯೋಜಕರು | 30 | ಶೀಘ್ರಗತಿ ನ್ಯಾಯಾಲಯಗಳು | 31.03.2011 |
| 2 | ಸಹಾಯಕ ಸರ್ಕಾರಿ ಅಭಿಯೋಜಕರು-ವ-ಸಹಾಯಕ ಸರ್ಕಾರಿ ವಕೀಲರು, | 01 | ಹೆಚ್ಚುವರಿ ಸಿವಿಲ್ ಜಡ್ಜ್(ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗುಬ್ಬಿ, | 31.03.2011 |

## ಇಂಧನ ಸಚಿವಾಲಯ

**ವಿಷಯ :** M/s Sree Channesha Power ಇವರಿಗೆ 5.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಭದ್ರ ಕಿಜವಿ/2010/2024 ದಿನಾಂಕ: 22.06.2010/06.07.2010.

2. ದಿನಾಂಕ: 06.08.2010 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Sree Channesha Power ಇವರಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ದೊನಬಗಟ್ಟೆ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Sree Channesha Power ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ : ಇಎನ್ 297 ಎನ್‌ಸಿಇ 2010, ಬೆಂಗಳೂರು, ದಿನಾಂಕ : 16.09.2010.**

M/s Sree Channesha Power ಇವರಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ದೊನಬಗಟ್ಟೆ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir **Latitude:** $13^0$52'48" **Longitude:** $75^0$42'50" Power House-**Latitude:** $13^0$52'56" **Longitude:** $75^0$42'25") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್.ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

ಪಿ.ಆರ್. 2601

## EDUCATION SECRETARIAT

**Sub :** Regarding extension of tenure of the Fee Regulatory Committee for admission of Students to professional courses (Medical, Dental, Ayush and Engineering)

**Read :** 1. G.O.No. ED 44 TEC 2010 dt.24.5.2010
2. Letters No. FRC/CR/05/2010-11 dt.7.8.2010 and 6.9.2010

**PREAMBLE :**

In the Government Order read above, a Fee Regulatory Committee under the chairmanship of Justice Sri B.Padmaraj (Retd. High Court Judge) was constituted for fixation of fee for the students who are admitted into unaided professional educational institutions (Medical, dental, Ayush and Engineering) (Minority and non-minority) initially for a period of six months from the date of issue of the said order i.e. 24.5.2010 which period comes to an end on 23.11.2010.

The Chairman of the Fee Regulatory Committee in his letters read at (2) above has requested for extension of the tenure of the Fee Regulatory Committee for another six months since the work load is enormous i.e. scrutiny of books of accounts of engineering, medical, dental, ayush colleges, personal hearings and finalization of report etc., and the Committee is finding it difficult to complete task within the stipulated period of six months. The proposal has been examined. Hence the order.

**GOVERNMENT ORDER NO : ED 44 TEC 2010, BENGALORU, DATED : 14TH OCTOBER 2010**

In view of the circumstances, Government are pleased to extend the tenure of the Fee Regulatory Committee headed by Justice Sri B.Padmaraj for an another period of six months from 24.11.2010 to 23.5.2011 to complete the above task.

By Order and in name of the Governor of Karnataka,

**B.N.JAGADEESH**

Under Secretary to Government

Education Department

(Technical Education)

P.R. 2602

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಸೇರ್ಪಡೆ**

**ಸಂಖ್ಯೆ: ಸಿಆಸುಇ 07 ಹೆಚ್‌ಹೆಚ್‌ಎಲ್ 2009 (ಭಾಗ) ಬೆಂಗಳೂರು, ದಿನಾಂಕ: 13–10–2010.**

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ: 20:25:26 ಪಿಯುಬಿ 1, ದಿನಾಂಕ: 15–06–1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯೇಬಲ್ ಇನ್ಸ್‌ಸ್ಟ್ರುಮೆಂಟ್ಸ್ ಆಕ್ಟ್ 1881ರ (1881ರ ಅಧಿನಿಯಮ ಸಂ.26) 25ನೇ ಸೆಕ್ಷನ್ ನಲ್ಲಿರುವ ವಿವರಣೆಯಂತೆ ದಿನಾಂಕ: 22–10–2010 ಶುಕ್ರವಾರ ಶೀಗೆ ಹುಣ್ಣಿಮೆಯಂದು ಆಚರಿಸುವ ಮಹರ್ಷಿ ವಾಲ್ಮಿಕಿ ಜಯಂತಿಯ ಆಚರಣೆಗಾಗಿ ಕರ್ನಾಟಕ ರಾಜ್ಯಾದ್ಯಂತ ಸಾರ್ವಜನಿಕ ರಜೆಯನ್ನು ಸರ್ಕಾರವು ಘೋಷಿಸಿದೆ. ಈ ರಜೆಯನ್ನು ಸರ್ಕಾರದ ಅಧಿಸೂಚನೆ–II ರ ಸಂಖ್ಯೆ: ಸಿಆಸುಇ 07 ಹೆಚ್‌ಹೆಚ್‌ಎಲ್, 2009, ದಿನಾಂಕ: 07–12–2009 ರಲ್ಲಿಯ ಕ್ರಮ ಸಂಖ್ಯೆ: 15 ರ ನಂತರ ಈ ಕೆಳಕಂಡ ಕ್ರಮಸಂಖ್ಯೆಯಂತೆ ಹೆಚ್ಚುವರಿಯಾಗಿ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ದಿನಾಂಕ: | ವಾರಗಳು | ಸಾರ್ವಜನಿಕ ರಜಾ ದಿನ |
|---|---|---|---|
| 15–ಎ | 22–10–2010 | ಶುಕ್ರವಾರ | ಮಹರ್ಷಿ ವಾಲ್ಮೀಕಿ ಜಯಂತಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,

(ರಾಜ್ಯ ಶಿಷ್ಟಾಚಾರ)

ಪಿ.ಆರ್. 2603

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಎಚ್.ಎಂ.ಮುಜೀಬ್ ಅಹಮದ್, ಕೆ.ಎ.ಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ–ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಸಂ: ಸಿಆಸುಇ 54 ಕೆಇವಿ 08 ದಿ: 15–10–08.

2. ಶ್ರೀ.ಎಚ್.೦.ಮುಜೀಬ್ ಅಹಮದ್, ಕೆ.ಎ.ಎಸ್. ಅಧಿಕಾರಿ ರವರು ನೋಟೀಸಿಗೆ ನೀಡಿರುವ ಉತ್ತರ ದಿ: 31–01–09

**ಪ್ರಸ್ತಾವನೆ :**

ಶ್ರೀ ಎಚ್.ಎಂ.ಮುಜೀಬ್ ಅಹಮದ್, ಕೆ.ಎ.ಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ರವರು 1986–87ನೇ ಸಾಲಿನಲ್ಲಿ ಯಳಂದೂರು ತಾಲ್ಲೂಕಿನ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಬಿಳಿಗಿರಿ ಶ್ರೀರಂಗನಾಥಸ್ವಾಮಿ ದೇವಸ್ಥಾನದ ಒಟ್ಟು ರೂ. 1,77,341.00 ಗಳನ್ನು ದುರುಪಯೋಗ ಪಡಿಸಿಕೊಂಡಿರುವ ಹಾಗೂ ಕಳಸ ಪ್ರತಿಷ್ಠಾಪನೆ, ಕಳಾಸಾಭಿಷೇಕ ವೆಚ್ಚಕ್ಕಾಗಿ ಮೇಲಾಧಿಕಾರಿಗಳಿಂದ ಅನುಮತಿ ಪಡೆಯದೇ ಸಾರ್ವಜನಿಕರಿಂದ ವಂತಿಕೆ ವಸೂಲಿ ಮಾಡಿ ಆ ಬಗ್ಗೆ ಲೆಕ್ಕಪತ್ರಗಳನ್ನು ನಿರ್ವಹಿಸದಿರುವ ಆರೋಪದ ಕುರಿತು ಮೇಲೆ ಕ್ರಮ ಸಂ(1) ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಇವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಮೇಲೆ ಓದಲಾದ ಕ್ರಮ ಸಂ(2) ರಲ್ಲಿ ಅಪಾದಿತ ಅಧಿಕಾರಿಗಳು ನೋಟೀಸ್‌ಗೆ ಉತ್ತರ ಸಲ್ಲಿಸಿ ಈ ಕೆಳಕಂಡ ಕಾರಣಗಳಿಂದಾಗಿ ತಮ್ಮನ್ನು ಆರೋಪಗಳಿಂದ ಕೈಬಿಡುವಂತೆ ಕೋರಿದ್ದಾರೆ.

ಸದರಿ ಪ್ರಕರಣವು ಸುಮಾರು 20 ವರ್ಷಗಳ ಹಿಂದೆ ನಡೆದಿದ್ದು ತಮ್ಮ ಮೇಲಿನ ಆರೋಪಗಳನ್ನು ರಾಜ್ಯ ಲೆಕ್ಕ ಪತ್ರ ಇಲಾಖೆಯ ಸಹಾಯಕ ನಿಯಂತ್ರಕರು, ಸ್ಥಳೀಯ ಲೆಕ್ಕ ಪರಿಶೋಧನಾ ವರ್ತುಲ ಮೈಸೂರು ಇತರ ಆಡಿಟ್ ವರದಿಯ ಆಧಾರದ ಮೇಲೆ ಮಾಡಲಾಗಿದ್ದು, ಆ ಸಮಯದಲ್ಲಿ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸಿದ ತಮ್ಮ ಗಮನಕ್ಕೆ ಹಾಗೂ ಧರ್ಮದರ್ಶಿಗಳ ಗಮನಕ್ಕೆ ತಾರದೆಯೇ ಲೆಕ್ಕ ತಪಾಸಣೆ ಮಾಡಿದ್ದು, ತಮಗೆ ಆಡಿಟ್‌ನಲ್ಲಿ ಹಾಜರಿರಲು ಅವಕಾಶ ನೀಡದೇ ಏಕಪಕ್ಷೀಯವಾಗಿ ಪರಿಶೀಲಿಸಿ ದಾಖಲೆಗಳನ್ನೇ ಆಡಿಟ್‌ಗೆ ಸಲ್ಲಿಸಿಲ್ಲವೆಂದು ಆಪಾದಿಸಿರುವುದು ಸರಿಯಿಲ್ಲವೆಂದು ತಿಳಿಸಿರುತ್ತಾರೆ. ಆಡಿಟ್ ವರದಿಯನ್ನು ಪರಿಶೀಲಿಸಿದಾಗ ಶ್ರೀ ಬಿಳಿಗಿರಿ ರಂಗನಾಥಸ್ವಾಮಿ ಪ್ರತಿಷ್ಠಾಪನಾ ಮಹೋತ್ಸವದ ಕಾರ್ಯಕ್ರಮವನ್ನು ಧರ್ಮದರ್ಶಿಗಳು ಹಾಗೂ ವಿಶೇಷ ಜಿಲ್ಲಾಧಿಕಾರಿ ಹಾಗೂ ಮುಜರಾಯಿ ಕಮಿಷನರ್ ನೇತೃತ್ವದಲ್ಲಿ ನೆರವೇರಿಸಲಾಗಿದ್ದು, ಈ ಕಾರ್ಯಕ್ರಮವನ್ನು ನಡೆಸುವುದಕ್ಕೆ ಮುಜರಾಯಿ ಇಲಾಖೆಯಿಂದ ಅನುಮೋದನೆ ಪಡೆಯಲಾಗಿದೆಯೆಂದು ಹಾಗೂ ಅಂದಿನ ಧರ್ಮದರ್ಶಿಗಳ ಸಮಿತಿಯ 11 ಸದಸ್ಯರ ಪೈಕಿ ಈಗಾಗಲೇ 7 ಜನರು ಮೃತ ಪಟ್ಟಿರುವುದರಿಂದ, ಒಂದು ವೇಳೆ ಯಾವುದೇ ಅವ್ಯವಹಾರ ಆಗಿದ್ದಲ್ಲಿ ಸಮಿತಿಯವರು ಕೂಡ ಇದರ ಬಗ್ಗೆ ಸಂಬಂಧಪಟ್ಟ ಹಿರಿಯ ಅಧಿಕಾರಿಗಳಿಗೆ ದೂರನ್ನು ಸಲ್ಲಿಸುವ ಸಾಧ್ಯತೆಯಿತ್ತೆಂದು ಹಾಗೂ ಈ ಆಡಿಟ್ ವರದಿಯ ಮೇಲೆ ಆಪಾದಿತರ ನಂತರ ಬಂದ ಅಧಿಕಾರಿಗಳಿಂದ ವಿವರಣೆಗಳನ್ನು ಪಡೆದು ಆಕ್ಷೇಪಣೆಗಳನ್ನು ಸರಿಪಡಿಸಲಾಗಿದೆಯೇ ಎಂಬ ಬಗ್ಗೆ ಮಾಹಿತಿ ಇರುವುದಿಲ್ಲವೆಂದು ಇದರಲ್ಲಿ ಯಾವುದೇ ಹಣಕಾಸಿನ ದುರುಪಯೋಗ ಆಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಶ್ರೀ ಎಚ್.ಎಂ.ಮುಜೀಬ್ ಅಹಮದ್ ಕೆ.ಎ.ಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಇವರು ಸಲ್ಲಿಸಿರುವ ವಿವರಣೆಯನ್ನು ಮತ್ತು ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ಪರಿಶೀಲಿಸಿದಾಗ, ದೇವಾಲಯದ ಅಭಿವೃದ್ಧಿಗಾಗಿ ಕೈಗೊಂಡ ಕರ್ತವ್ಯಗಳಲ್ಲಿ ಸಣ್ಣ ಪುಟ್ಟ ಕೆಲವು ಲೋಪದೋಷಗಳಿದ್ದರೂ ಕೂಡ ಬಿಳಿಗಿರಿ ಶ್ರೀರಂಗನಾಥಸ್ವಾಮಿ ದೇವಸ್ಥಾನದ ಮೂಲ ವಿಗ್ರಹದ ಪುನರ್ ಪ್ರತಿಷ್ಠಾಪನೆ ಬಗ್ಗೆ ಆ ಸಮಯದಲ್ಲಿದ್ದ ಧರ್ಮದರ್ಶಿಗಳ ಸಮ್ಮುಖದಲ್ಲಿ ಹಾಗೂ ವಿಶೇಷ ಜಿಲ್ಲಾಧಿಕಾರಿಗಳು ಮತ್ತು ಮುಜರಾಯಿ ಆಯುಕ್ತರ ಸಮ್ಮುಖದಲ್ಲಿ ನಿರ್ಣಯ ತೆಗೆದುಕೊಂಡಿರುವುದರಿಂದ, ಈ ಉದ್ದೇಶಕ್ಕಾಗಿ ದೇವಸ್ಥಾನದ ನಿಧಿಯನ್ನು ಬಳಸಲಾಗಿಲ್ಲವೆಂದು ಮತ್ತು ಸಾರ್ವಜನಿಕರಿಂದ ಪಡೆದ ವಂತಿಕೆಯ ಹಣವನ್ನು ವೆಚ್ಚ ಮಾಡಿರುವುದು ಕಂಡು ಬರುತ್ತದೆ. ಅಲ್ಲದೇ ಆ ಸಮಯದಲ್ಲಿದ್ದ 11 ಧರ್ಮದರ್ಶಿಗಳ ಸಮಿತಿಯ ಪೈಕಿ 7 ಜನರು ಮೃತಪಟ್ಟಿರುತ್ತಾರೆ. ಈ ಧರ್ಮದರ್ಶಿಗಳ ಸಮಿತಿಯ ಪೈಕಿ ಕೆಲವು ಗಣ್ಯ ಧರ್ಮದರ್ಶಿಗಳು ಈಗಲೂ ಜೀವಂತವಾಗಿದ್ದು ಒಂದು ವೇಳೆ ಯಾವುದೇ ಅವ್ಯವಹಾರ ಆಗಿದ್ದಲ್ಲಿ ಇವರು ಇದರ ಬಗ್ಗೆ ಸಂಬಂಧಪಟ್ಟ ಹಿರಿಯ ಅಧಿಕಾರಿಗಳಿಗೆ ದೂರನ್ನು ಸಲ್ಲಿಸುವ ಸಾಧ್ಯತೆ ಇತ್ತು. ಆದರೆ ಈ ಬಗ್ಗೆ ಯಾವುದೇ ದೂರುಗಳು ದಾಖಲಾಗುವುದಿಲ್ಲ. ಮೇಲ್ಕಂಡಂತೆ ಈ ಪ್ರಕರಣದಲ್ಲಿ ಆಪಾದಿತರು ಸಲ್ಲಿಸಿರುವ ಸಮಜಾಯಿಷಿಯನ್ನು ಪರಿಶೀಲಿಸಿ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಮುಂದುವರೆಸುವ ಅಗತ್ಯತೆ ಇರುವುದಿಲ್ಲವೆಂದು ನಿರ್ಣಯಿಸಿ ಇವರನ್ನು ಆರೋಪಗಳಿಂದ ಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 54 ಕೆಇವಿ 2008, ಬೆಂಗಳೂರು ದಿನಾಂಕ : 28ನೇ ಸೆಪ್ಟೆಂಬರ್ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಎಚ್.ಎಂ.ಮುಜೀಬ್ ಅಹಮದ್, ಕೆ.ಎ.ಎಸ್ (ಆಯ್ಕೆ ಶ್ರೇಣಿ) ರವರನ್ನು ದಿ: 15–10–2008 ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 2604

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು–2)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಪಿ.ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ದಾಖಲಾದ 'ಅಕ್ರಮ ಆಸ್ತಿ ಹೊಂದಿರುವ' ಪ್ರಕರಣದ ಅಭಿಯೋಜನಾ ಪರಿಷ್ಕೃತ ಆದೇಶ ಕುರಿತು.

**ಓದಲಾಗಿದೆ :** 1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಬಿಡಿ–19/ಸಿಆರ್–9/2006/ಬಿಎಲ್‌ಆರ್, ದಿನಾಂಕ: 04–05–2010.

2) ತನಿಖಾಧಿಕಾರಿಯವರ ಅಂತಿಮ ವರದಿ ದಿನಾಂಕ: 16–04–2010.

3) ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳು, ಸಾಕ್ಷಿದಾರರ ಹೇಳಿಕೆಗಳು ಮತ್ತು ತನಿಖಾಧಿಕಾರಿಯ ಅಂತಿಮ ವರದಿಯ ಕಡತಗಳು.

4) ಸರ್ಕಾರಿ ಆದೇಶ ಸಂಖ್ಯೆ: ಆಇ 13 ವಾತೆತ 2007 ದಿನಾಂಕ: 17–08–2010

5) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಬಿಡಿ–19/ಸಿಆರ್–9/2006/ಬಿಎಲ್‌ಆರ್, ದಿನಾಂಕ: 04–09–2010.

**ಪ್ರಸ್ತಾವನೆ :**

ಶ್ರೀ ಪಿ.ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ಗುನ್ನೆ ಸಂಖ್ಯೆ : 09/2006 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು, ಇಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ: 04–05–2010 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಮಂಜೂರಾತಿಗಾಗಿ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ:(1)ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

I) ಪ್ರಥಮ ವರ್ತಮಾನ ವರದಿ ದಿನಾಂಕ: 08–06–2006.

II) ಶೋಧನಾ ಪಂಚನಾಮೆ

(1) ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲ್ಲೂಕು ಸರ್ಜಾಪುರ ಬಾಗಲೂರು ಮುಖ್ಯ ರಸ್ತೆಯಲ್ಲಿರುವ ಶ್ರೀ ಪಿ.ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಾಸದ ಮನೆ ದಿನಾಂಕ: 09–06–2006.

(2) ಲಯನ್ಸ್ ಪ್ಲೋರಿಟೆಕ್ ಪ್ರೈ. ಲಿ. ಫಾರ್ಮ್‌ಹೌಸ್ ನಂ.88, 89, ಎನ್.ಹೆಚ್.207, ಎಂ.ಸಿ.ಹಳ್ಳಿ, ಚಿಕ್ಕ ತಿರುಪತಿ ರಸ್ತೆ, ಸರ್ಜಾಪುರ ಅಂಚೆ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ. ದಿನಾಂಕ: 09–06–2006.

(3) ಬೆಂಗಳೂರು ನಗರ ಜಿಲ್ಲೆ ಸರ್ಜಾಪುರ ಹೋಬಳಿ, ಎಂ.ಸಿ.ಹಳ್ಳಿ ಗ್ರಾಮದಲ್ಲಿ ವಾಸವಾಗಿರುವ ಶ್ರೀ ಪಿ.ನಾಗರಾಜ್, ಶ್ರೀ ಪಿ.ವೆಂಕಟೇಶ್, ಶ್ರೀ ಪಾಪಣ್ಣರವರ ವಾಸದ ಮನೆ. ದಿನಾಂಕ: 09–06–2006.

(4) ವಾಣಿಜ್ಯ ತೆರಿಗೆ ಕಾರ್ಯಾಲಯ, ಕೋರಮಂಗಲದಲ್ಲಿರುವ ಶ್ರೀ ಪಿ.ರಂಗಸ್ವಾಮಿಯವರು ಕರ್ತವ್ಯನಿರ್ವಹಿಸುತ್ತಿರುವ ಕಛೇರಿ ದಿನಾಂಕ: 09–06–2006.

III) ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ: 16–04–2010.

IV) ತನಿಖೆಯ ಅಂತಿಮ ವರದಿಯ ಭಾಗಗಳಾದ ಈ ಕೆಳಕಂಡ ಕಡತಗಳು:–

**ಸಾಕ್ಷಿಗಳ ಹೇಳಿಕೆಗಳು:–**

1) ಶ್ರೀಮತಿ ಕೆ.ನಾಗಮ್ಮ, ದ್ವಿ.ದ.ಸ., ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಕೃಷಿ ಭವನ, ಬೆಂಗಳೂರು.
2) ಶ್ರೀಮತಿ ಕೆ.ರತ್ನಮ್ಮ, ಬೆರಳಚ್ಚುಗಾರರು, ಸಮಾಜ ಕಲ್ಯಾಣ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು.
3) ಶ್ರೀ ಎ.ನಾಗಯ್ಯ, ದ್ವಿ.ದ.ಸ., ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.
4) ಶ್ರೀ ಬಿ.ನಾರಾಯಣಪ್ಪ, ಪ್ರ.ದ.ಸ., ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿ.ವಿ.ಟವರ್, ಬೆಂಗಳೂರು.
5) ಶ್ರೀ ಬಿ.ಎಂ.ಅರುಣ್, ದ್ವಿ.ದ.ಸ., ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ವಿ.ವಿ.ಟವರ್, ಬೆಂಗಳೂರು.
6) ಶ್ರೀಮತಿ ಎಂ.ಎನ್.ಸುಜಾತ, ದ್ವಿ.ದ.ಸ., ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿ.ವಿ.ಟವರ್, ಬೆಂಗಳೂರು.
7) ಶ್ರೀಮತಿ ಜಿ.ಜಯಲಕ್ಷ್ಮಮ್ಮ, ದ್ವಿ.ದ.ಸ., ಜಿಲ್ಲಾ ಪಂಚಾಯತಿ, ಬೆಂಗಳೂರು ನಗರ ಜಿಲ್ಲೆ, ಕೃಷಿ ಭವನ, ಬೆಂಗಳೂರು.
8) ಶ್ರೀ ಎಂ.ಆರ್.ಜಯಪ್ರಕಾಶ್, ಪ್ರ.ದ.ಸ., ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ವಿ.ವಿ.ಟವರ್, ಬೆಂಗಳೂರು.

**ಪರಿಶೀಲನಾ ಅವಧಿ ದಿನಾಂಕ: 01–01–1982 ರಿಂದ 09–06–2006 ರಲ್ಲಿ ಆರೋಪಿತರು ಮತ್ತು ಅವರ ಕುಟುಂಬ ವರ್ಗದವರು ಗಳಿಸಿರುವ ಸ್ಥಿರಾಸ್ತಿಗಳು**

| ಕ್ರ ಸಂ. | ವಿವರ | ಮೊತ್ತ ರೂ.ಗಳಲ್ಲಿ | ಆಸ್ತಿಯು ಯಾರ ಹೆಸರಿನಲ್ಲಿದೆ |
|---|---|---|---|
| 1. | ನಿವೇಶನ ಸಂಖ್ಯೆ: 49, ಖಾತಾ ಸಂಖ್ಯೆ:9 ವಿಸ್ತೀರ್ಣ 40X40 ಚ.ದ. ಅಂಬಲಿಪುರ, ವರ್ತೂರು ಹೋಬಳಿ, ಸರ್ಜಾಪುರ, ಬೆಂಗಳೂರು ದಕ್ಷಿಣ | **40,000–00** | ಆರೋಪಿ ಶ್ರೀ ಪಿ.ರಂಗಸ್ವಾಮಿ |
| 2. | ನಿವೇಶನ ಸಂಖ್ಯೆ: 6, ಖಾತಾ ಸಂಖ್ಯೆ:46/50/6 ವಿಸ್ತೀರ್ಣ 35X40 ಚ.ದ. ವೆಂಕಟಪುರ ಗ್ರಾಮ, ಬೆಂಗಳೂರು ದಕ್ಷಿಣ ತಾಲ್ಲೂಕು. | **60,000–00** | ಆರೋಪಿ ಶ್ರೀ ಪಿ.ರಂಗಸ್ವಾಮಿ |
| 3. | ಸರ್ಜಾಪುರ ಹೋಬಳಿ, ಮಹಲ್ ಚೌಡದೇನಹಳ್ಳಿ ಗ್ರಾಮ ಖಾತಾ ಸಂಖ್ಯೆ:497/491 62X25 ಅಡಿ ವಿಸ್ತೀರ್ಣದ ನಿವೇಶನ | **20,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 4. | ಸರ್ಜಾಪುರ ಹೋಬಳಿ, ಬಜಾರ್ ಸ್ಟ್ರೀಟ್, ಜಂಜರು ನಂ.93 ಮತ್ತು ಆಸ್ತಿಯ ನಂ.80 ರಲ್ಲಿ 49X38 ಅಡಿ ವಿಸ್ತೀರ್ಣದ ನಿವೇಶನ | **1,85,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |

| | | | |
|---|---|---|---|
| 5. | ಎಂ.ಸಿ.ಹಳ್ಳಿ ಗ್ರಾಮದ ನಿವೇಶನ ಖಾತಾ ಸಂಖ್ಯೆ: 58 ವಿಸ್ತೀರ್ಣ 60X30 ಅಡಿ ವಿಸ್ತೀರ್ಣ. | **5,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |

**ಜಮೀನುಗಳು :**

| | | | |
|---|---|---|---|
| 1. | ಸರ್ಜಾಪುರ ಹೋಬಳಿ, ಮಹಲ್ ಚೌಡದೇವನಹಳ್ಳಿ ಗ್ರಾಮದ ಸರ್ವೇ ನಂ.124/2 ರಲ್ಲಿ 25 ಗುಂಟೆ ಜಮೀನು | **2,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 2. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ.152 ರಲ್ಲಿ 2 ಎಕರೆ ಜಮೀನು | **5,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 3. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ.152 ರಲ್ಲಿ 2 ಎಕರೆ 25 ಗುಂಟೆ ಜಮೀನು | **9,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 4. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ.154/1 ರಲ್ಲಿ 2 ಎಕರೆ 1 ಗುಂಟೆ ಜಮೀನು | **5,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 5. | ಸರ್ಜಾಪುರ ಹೋಬಳಿ, ಎಂ.ಸಿ.ಹಳ್ಳಿ ಗ್ರಾಮದ ಸರ್ವೇ ನಂ.127/1 ರಲ್ಲಿ 34 1/2 ಗುಂಟೆ ಜಮೀನು | **3,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 6. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ.154/2 ರಲ್ಲಿ 26 ಗುಂಟೆ, 154/3 ರಲ್ಲಿ 18 ಗುಂಟೆ ಮತ್ತು 154/05 ರಲ್ಲಿ 20 ಗುಂಟೆ ಜಮೀನು | **8,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 7. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ.154/4 ರಲ್ಲಿ 18 ಗುಂಟೆ ಜಮೀನು | **2,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 8. | ವರ್ತೂರು ಹೋಬಳಿ ದೊಡ್ಡತಿಮ್ಮಸಂದ್ರ ಗ್ರಾಮದ ಸರ್ವೇ ನಂ.69/3 ರಲ್ಲಿ 2 ಎಕರೆ 5 ಗುಂಟೆ ಜಮೀನು | **4,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 9. | ಸರ್ಜಾಪುರ ಹೋಬಳಿ, ಮಗಳೂರು ಗ್ರಾಮದ ಸರ್ವೇ ನಂ.161/1 ರಲ್ಲಿ 2 ಎಕರೆ 24 ಗುಂಟೆ ಜಮೀನು<br>ಸದರಿ ಜಮೀನನ್ನು ದಿ: 24–08–1995 ರಂದು ಶ್ರೀಮತಿ ಅಶ್ವಿನಿ, ಆನೇಕಲ್ ತಾಲ್ಲೂಕು ಇವರಿಗೆ ರೂ. 1,85,000/–ಕ್ಕೆ ಮಾರಾಟ ಮಾಡಿರುತ್ತಾರೆ. | **30,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 10. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ.164 ರಲ್ಲಿ 2 ಎಕರೆ ಜಮೀನು | **1,00,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 11. | ಸರ್ಜಾಪುರ ಹೋಬಳಿ, ಮಹಲ್ ಚೌಡದೇನಹಳ್ಳಿ ಗ್ರಾಮದ ಸರ್ವೇ ನಂ.88 ರಲ್ಲಿ 1 ಎಕರೆ 13 ಗುಂಟೆ ಜಮೀನು | **1,50,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 12. | ಸರ್ಜಾಪುರ ಹೋಬಳಿ, ತಿಂಡ್ಲು ಗ್ರಾಮದ ಸರ್ವೇ ನಂ.158 ರಲ್ಲಿ 1 ಎಕರೆ ಜಮೀನು | **1,05,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 13. | ಸರ್ಜಾಪುರ ಹೋಬಳಿ, ಎಂ.ಸಿ.ಹಳ್ಳಿ ಗ್ರಾಮದ ಸರ್ವೇ ನಂ.88 ರಲ್ಲಿ 2 ಎಕರೆ 4 ಗುಂಟೆ ಜಮೀನು | **2,10,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 14. | ಸರ್ಜಾಪುರ ಹೋಬಳಿ, ಬಿಳೇಕಲ್ಲು ಗ್ರಾಮದ ಸರ್ವೇ ನಂ.66 ರಲ್ಲಿ 11 ಗುಂಟೆ ಜಮೀನು | **2,00,000–00** | ಆರೋಪಿತರ ಮಗ ಶ್ರೀ ಸಿ.ಆರ್.ಮನೋಹರ್ |
| 15. | ಸರ್ಜಾಪುರ ಹೋಬಳಿ, ಎಂ.ಸಿ.ಹಳ್ಳಿ ಗ್ರಾಮದ ಸರ್ವೇ ನಂ.89 ರಲ್ಲಿ 2 ಎಕರೆ 32 ಗುಂಟೆ ಜಮೀನು | **2,10,000–00** | ಆರೋಪಿತರ ಮಗ ಶ್ರೀ ಸಿ.ಆರ್.ಮನೋಹರ್ |
| 16. | ಸರ್ಜಾಪುರ ಹೋಬಳಿ, ಸರ್ಜಾಪುರ ಗ್ರಾಮದ ಸರ್ವೇ ನಂ.13/ಎ ರಲ್ಲಿ ಮತ್ತು 13/2ಬಿ, 14/1 ಒಟ್ಟು 21.8 ಗುಂಟೆ ಜಮೀನು | **1,34,500–00** | ಆರೋಪಿತರ ಮಗ ಶ್ರೀ ಸಿ.ಆರ್.ಮನೋಹರ್ |
| 17. | ಸರ್ಜಾಪುರ ಹೋಬಳಿ, ದೊಡ್ಡ ತಿಮ್ಮಸಂದ್ರ ಗ್ರಾಮದ ಸರ್ವೇ ನಂ.126/2 ರಲ್ಲಿ 28 ಗುಂಟೆ ಜಮೀನು | **67,500–00** | ಆರೋಪಿತರ ಮಗ ಶ್ರೀ ಸಿ.ಆರ್.ಮನೋಹರ್ |

**ಮನೆಗಳು :**

| | | | |
|---|---|---|---|
| 1. | ತಾವರೆ ಕೆರೆ ಗ್ರಾಮ ನಿವೇಶನ ಸಂಖ್ಯೆ:12 ಖಾತಾ ನಂ.9/1 ರಲ್ಲಿ (40X70 ವಿಸ್ತೀರ್ಣ) ಖರೀದಿಸಿರುವ ಮನೆ<br>ಸದರಿ ಮನೆಯನ್ನು ದಿ: 29–07–2004 ರಂದು ಶ್ರೀಮತಿ ಉಮಾದೇವಿ ಇವರಿಗೆ ರೂ.10,16,300/– ಕ್ಕೆ ಮಾರಾಟ ಮಾಡಿರುತ್ತಾರೆ. | **1,92,000–00** | ಆರೋಪಿತರ ತಂದೆ ಶ್ರೀ ಪಾಪಣ್ಣ |
| 2. | ಬಾಗಲೂರು ರಸ್ತೆ, ಸರ್ಜಾಪುರ, ಬೆಂಗಳೂರು ಗ್ರಾಮದ ಸರ್ವೇ ನಂ.13/2ಎ, 13/2ಬಿ, 14/1 ಮತ್ತು 21/8 ರಲ್ಲಿರುವ ಮನೆ | **35,75,000–00** | ಆರೋಪಿ ಶ್ರೀ ಪಿ. ರಂಗಸ್ವಾಮಿ |
| 3. | ಮಹಲ್ ಚೌಡದೇವನಹಳ್ಳಿ, ಸರ್ಜಾಪುರದ ಮನೆ ನವೀಕರಣ | **1,37,000–00** | ಆರೋಪಿ ಶ್ರೀ ಪಿ. ರಂಗಸ್ವಾಮಿ |

| | | | |
|---|---|---|---|
| 4. | ಎಂ.ಸಿ.ಹಳ್ಳಿ, ಸರ್ವೇ ನಂ.89 ರಲ್ಲಿ ನಿರ್ಮಿಸಿರುವ ಫಾರ್ಮಹೌಸ್ | **1,83,000–00** | ಆರೋಪಿ ಶ್ರೀ ಪಿ. ರಂಗಸ್ವಾಮಿ |
| 5. | ಎಂ.ಸಿ.ಹಳ್ಳಿ, ಸರ್ವೇ ನಂ.88, 89 ರಲ್ಲಿ ನಿರ್ಮಿಸಿರುವ ನೀರು ಸಂಗ್ರಹಣಾ ಟ್ಯಾಂಕ್‌ಗಳ ನಿರ್ಮಾಣ. | **1,40,000–00** | ಆರೋಪಿ ಶ್ರೀ ಪಿ. ರಂಗಸ್ವಾಮಿ |

**ಬ್ಯಾಂಕ್ ಖಾತೆಗಳು:**

| | | | |
|---|---|---|---|
| 1. | ಆಂಧ್ರ ಬ್ಯಾಂಕ್, ಬೆಂಗಳೂರು ಶಾಖೆ, ಎಸ್.ಬಿ.ಖಾತೆ ಸಂಖ್ಯೆ: 002401100112321 | **56,993–00** | ಆರೋಪಿ ಶ್ರೀ ಪಿ. ರಂಗಸ್ವಾಮಿ |
| 2. | ಐ.ಎನ್.ಜಿ.ವೈಶ್ಯ ಬ್ಯಾಂಕ್, ಬೆಂಗಳೂರು ಎಸ್.ಬಿ.ಖಾತೆ ಸಂಖ್ಯೆ: 160010056198 | **1,903–00** | ಆರೋಪಿತರ ಮಗ ಶ್ರೀ ಸಿ.ಆರ್.ಮನೋಹರ್ |
| 3. | ಐ.ಸಿ.ಐ.ಸಿ.ಐ ಬ್ಯಾಂಕ್, ಕೋರಮಂಗಲ, ಬೆಂಗಳೂರು ಸಿ.ಎ.ಅಕೌಂಟ್ ನಂ.004705004474 | **3,80,387–00** | ಆರೋಪಿತರ ಮಗ ಶ್ರೀ ಸಿ.ಆರ್.ಮನೋಹರ್ |
| 4. | ಐ.ಸಿ.ಐ.ಸಿ.ಐ ಬ್ಯಾಂಕ್, ಕೋರಮಂಗಲ, ಬೆಂಗಳೂರು ಸಿ.ಎ.ಅಕೌಂಟ್ ನಂ.004705002557 | **2,03,472–00** | ಆರೋಪಿತರ ಮಗ ಶ್ರೀ ಸಿ.ಆರ್.ಮನೋಹರ್ |

**ವ್ಯಾಪಾರಿ ಸಂಸ್ಥೆಗಳು :**

| | | | |
|---|---|---|---|
| 1. | ಸರ್ಜಾಪುರ, ಬೆಂಗಳೂರು, ಸರ್ವೇ ನಂ.88 ಮತ್ತು 89 ರಲ್ಲಿ ಪ್ರಾರಂಭಿಸಿರುವ ಮೆ:ಲಯನ್ಸ್ ಪ್ಲೋರಾ–1 ಸಂಸ್ಥೆ | **1,14,66,000–00 ಬಂಡವಾಳ** | ಆರೋಪಿತರ ತಂದೆ ಶ್ರೀ ಪಾಪಣ್ಣ, ಆರೋಪಿತರ ಮಕ್ಕಳಾದ ಶ್ರೀ ಸಿ.ಆರ್. ಮನೋಹರ್, ಶ್ರೀಮತಿ ಸಿ.ಆರ್. ಶೈಲಾ ಮತ್ತು ಶ್ರೀ ಸಿ.ಆರ್.ಗೋಪಿ |
| 2. | ಸರ್ಜಾಪುರ, ಬೆಂಗಳೂರು, ಸರ್ವೇ ನಂ.88 ಮತ್ತು 89 ರಲ್ಲಿ ಪ್ರಾರಂಭಿಸಿರುವ ಮೆ:ಲಯನ್ಸ್ ಪ್ಲೋರಾ–2 ಸಂಸ್ಥೆ | **22,58,000–00 ಬಂಡವಾಳ** | ಆರೋಪಿತರ ತಂದೆ ಶ್ರೀ ಪಾಪಣ್ಣ, ಆರೋಪಿತರ ಮಕ್ಕಳಾದ ಶ್ರೀ ಸಿ.ಆರ್. ಮನೋಹರ್, ಶ್ರೀಮತಿ ಸಿ.ಆರ್.ಶೈಲಾ ಮತ್ತು ಶ್ರೀ ಸಿ.ಆರ್.ಗೋಪಿ |
| 3. | ಸರ್ಜಾಪುರ, ಬೆಂಗಳೂರು, ಸರ್ವೇ ನಂ.89 ಮತ್ತು 152 ರಲ್ಲಿ ಪ್ರಾರಂಭಿಸಿರುವ ಮೆ:ಬಾಲಾಜಿ ಪ್ಲೋರಾ ಸಂಸ್ಥೆ | **1,28,26,000–00 ಬಂಡವಾಳ** | ಆರೋಪಿತರ ಮಗ ಶ್ರೀ ಸಿ.ಆರ್.ಗೋಪಿ, ಶ್ರೀ ನಾಗರಾಜ್ |

**ಆರೋಪಿತರು ಮತ್ತು ಅವರ ಕುಟುಂಬದ ಹೆಸರಿನಲ್ಲಿರುವ ವಾಹನಗಳು:**

| | | | |
|---|---|---|---|
| 1. | ಮೆ:ಲಯನ್ಸ್ ಪ್ಲೋರಾ ಸಂಸ್ಥೆ ಹೆಸರಿನಲ್ಲಿ ಖರೀದಿಸಿರುವ ಸ್ಕೋಡಾ ರೈಡರ್ ಕಾರು ನಂ.ಕೆಎ–53 ಎಂ–2367 | 11,16,698–00 | ಮೆ:ಲಯನ್ಸ್ ಪ್ಲೋರಾ ಸಂಸ್ಥೆ ಹೆಸರಿನಲ್ಲಿ |
| 2. | ಮೆ:ಲಯನ್ಸ್ ಪ್ಲೋರಾ ಸಂಸ್ಥೆ ಹೆಸರಿನಲ್ಲಿ ಖರೀದಿಸಿರುವ ಹೊಂಡೈ ಅಕ್ಸೆಂಟ್ ಕಾರು ನಂ.ಕೆಎ–05 ಎಂಇ–2367 | 7,10,415–00 | ಮೆ:ಲಯನ್ಸ್ ಪ್ಲೋರಾ ಸಂಸ್ಥೆ ಹೆಸರಿನಲ್ಲಿ |
| 3. | ಮೆ:ಲಯನ್ಸ್ ಎಸ್ಟೇಟ್ ಸಂಸ್ಥೆ ಹೆಸರಿನಲ್ಲಿ ಖರೀದಿಸಿರುವ ಮಹೇಂದ್ರ ಸ್ಕಾರ್ಪಿಯೋ ವಾಹನ ಸಂಖ್ಯೆ: ಕೆಎ01 ಎಂಆರ್–2367 | 7,58,067–00 | ಮೆ:ಲಯನ್ಸ್ ಎಸ್ಟೇಟ್ ಸಂಸ್ಥೆ |
| 4. | ಹುಂಡೈ ಗೆಟ್ಸ್ ಕಾರು ನಂ: ಕೆಎ–51 ಎಂ–1168 | 4,52,009–00 | ಆರೋಪಿತರ ಮಗ ಶ್ರೀ ಸಿ.ಆರ್.ಮನೋಹರ್ |
| 5. | ಮಾರುತಿ ಓಮ್ನಿ ವ್ಯಾನ್ ನಂ: ಕೆಎ01 ಎಂಬಿ–2747 ಮೆ:ಲಯನ್ಸ್ ಪ್ಲೋರಾ ಸಂಸ್ಥೆ | 2,50,497–00 | ಮೆ:ಲಯನ್ಸ್ ಪ್ಲೋರಾ ಸಂಸ್ಥೆ |
| 6. | ಟೊಯೊಟಾ ಕ್ವಾಲಿಸ್ ವಾಹನ ನಂ.ಕೆಎ08 ಎಂ–5565 | 3,40,000–00 | ಆರೋಪಿತರ ಮಗ ಶ್ರೀ ಸಿ.ಆರ್.ಮನೋಹರ್ |
| 7. | ಶೋಧನಾ ಪಂಚನಾಮೆಯಲ್ಲಿ ಕಂಡುಬಂದ ನಗದು ಹಣ | 2,26,300–00 | |
| 8. | ಆಪಾದಿತರ ಮನೆ ಶೋಧನಾ ಪಂಚನಾಮೆಯಲ್ಲಿ ಕಂಡುಬಂದ ಚಿನ್ನಾಭರಣಗಳು ಒಟ್ಟು 617 ಗ್ರಾಂ | 1,25,000–00 | |
| 9. | ಶೋಧನಾ ಪಂಚನಾಮೆಯಲ್ಲಿ ಕಂಡುಬಂದ ಗೃಹೋಪಯೋಗಿ ವಸ್ತುಗಳ ಮೌಲ್ಯ ಒಟ್ಟು | 4,68,120–00 | |

**ಆರೋಪಿತ ಅಧಿಕಾರಿಯಾದ ಶ್ರೀ ಪಿ.ರಂಗಸ್ವಾಮಿ ಮತ್ತು ಅವರ ಕುಟುಂಬದ ಹೆಸರಿನಲ್ಲಿರುವ ಆದಾಯದ ವಿವರಗಳು :**

| | | | |
|---|---|---|---|
| 1. | ಶ್ರೀ ಪಿ.ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿಯವರು ಪರಿಶೀಲನಾ ಅವಧಿಯಲ್ಲಿ ಪಡೆದಿರುವ ನಿವ್ವಳ ವೇತನದ ಆದಾಯ ದಿನಾಂಕ: 12–10–1981 ರಿಂದ 31–05–2006 ರವರೆಗೆ | **16,93,122–00** | ಆರೋಪಿತ ಅಧಿಕಾರಿ ಶ್ರೀ ಪಿ.ರಂಗಸ್ವಾಮಿ |

| | | | |
|---|---|---|---|
| 2. | ಜಿ.ಪಿ.ಎಫ್. ಖಾತೆ ಸಂಖ್ಯೆ: 3694 ರಿಂದ ಪಡೆದಿರುವ ಮುಂಗಡ | **68,000–00** | ಆರೋಪಿತ ಅಧಿಕಾರಿ ಶ್ರೀ ಪಿ.ರಂಗಸ್ವಾಮಿ |
| 3. | ಜಿ.ಪಿ.ಎಫ್. ಖಾತೆ ಸಂಖ್ಯೆ: 3694 ರಿಂದ ಪಡೆದಿರುವ ಭಾಗಶಃ ಹಿಂಪಡೆತ | **2,60,000–00** | ಆರೋಪಿತ ಅಧಿಕಾರಿ ಶ್ರೀ ಪಿ.ರಂಗಸ್ವಾಮಿ |
| 4. | ಎಲ್.ಐ.ಸಿ.ಪಾಲಿಸಿ ಸಂಖ್ಯೆ 610338900 ನ್ನು ಸರೆಂಡರ್ ಮಾಡಿರುವುದರಿಂದ ಬಂದಿರುವ ಆದಾಯ | **8,994–00** | ಆರೋಪಿತ ಅಧಿಕಾರಿ ಶ್ರೀ ಪಿ.ರಂಗಸ್ವಾಮಿ |
| 5. | ಮನೆ ನಂ.80/93, ಬಜಾರ್ ಸ್ಟ್ರೀಟ್, ಸರ್ಜಾಪುರ, ಬೆಂಗಳೂರು. ಇವರ ಬಾಡಿಗೆಯಿಂದ ಬಂದ ಆದಾಯ | **1,92,800–00** | ಆರೋಪಿತ ಅಧಿಕಾರಿಯವರ ತಂದೆ ಶ್ರೀ ಪಾಪಣ್ಣನವರ ಹೆಸರಿನಲ್ಲಿ |
| 6. | ಆರೋಪಿತರು ಬೇನಾಮಿಯಾಗಿ ಹಾಗೂ ತನ್ನ ಕುಟುಂಬದ ಸದಸ್ಯರುಗಳು ಜಮೀನುಗಳಿಂದ ಗಳಿಸಿರುವ ಕೃಷಿ ಹಾಗೂ ತೋಟಗಾರಿಕೆ ಬೆಳೆಗಳ ಒಟ್ಟು ಆದಾಯ | **1,04,107–00** | – |

ಶ್ರೀ ಪಿ.ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಮೊಬೈಲ್ ಚೆಕ್‌ಪೋಸ್ಟ್, ಕೋರಮಂಗಲ, ಬೆಂಗಳೂರುರವರು ತಮ್ಮ ಎಲ್ಲಾ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿದುಬಂದ ವಿಶ್ವಾಸಾರ್ಹ ಮಾಹಿತಿಯನ್ವಯ ಸದರಿ ಆಪಾದಿತರ ವಿರುದ್ಧ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಗ್ರಾಮಾಂತರ ಜಿಲ್ಲೆರವರು ದಿನಾಂಕ: 08–06–2006 ರಂದು ಅಧಿಕೃತ ತನಿಖಾಧಿಕಾರದ ಆದೇಶವನ್ನು ಪಡೆದು ಭ್ರಷ್ಟಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 13(1)(ಇ) ಜೊತೆಯಲ್ಲಿ ಓದಲಾದ 13(2) ರಡಿಯಲ್ಲಿ ಮೊಕದ್ದಮೆ ಸಂಖ್ಯೆ: 9/2006 ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಜಿಲ್ಲಾ ವಿಶೇಷ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆರವರಿಂದ ದಿನಾಂಕ: 08–06–2006 ರಂದು ಶೋಧನಾ ಆದೇಶವನ್ನು ಪಡೆದು ಸದರಿ ಆರೋಪಿತ ಸರ್ಕಾರಿ ಅಧಿಕಾರಿಗೆ ಸೇರಿದ ಆರೋಪಿತರ ನಿವಾಸದ ಮೇಲೆ ಮತ್ತು ಕಛೇರಿಯ ಮೇಲೆ ದಿನಾಂಕ: 09–06–2006 ರಂದು ದಾಳಿ ಮಾಡಿ ಶೋಧಿಸಿದಾಗ, ಕಂಡುಬಂದ ಚರ ಮತ್ತು ಸ್ಥಿರಾಸ್ತಿ, ಗೃಹೋಪಯೋಗಿ ಉಪಕರಣಗಳು, ಚಿನ್ನ ಮತ್ತು ಬೆಳ್ಳಿ, ಬ್ಯಾಂಕ್ ಡೆಪಾಸಿಟ್‌ಗಳು ಮತ್ತು ನಗದು ಹಣ, ಎಲೆಕ್ಟ್ರಾನಿಕ್ ವಸ್ತುಗಳು, ವಾಹನಗಳು, ಜೀವವಿಮೆ ಪಾಲಿಸಿಗಳು ಮತ್ತು ಖಾಲಿ ನಿವೇಶನಗಳು ಹಾಗೂ ಜಮೀನುಗಳು ಇವುಗಳನ್ನೊಳಗೊಂಡ ಆಸ್ತಿಗಳು ಮತ್ತು ಇವುಗಳಿಗೆ ಸಂಬಂಧಿಸಿದ ದಾಖಲಾತಿಗಳು ಸೇರಿದಂತೆ ಒಂದು ವಿವರವಾದ ಪಂಚನಾಮೆಯನ್ನು ಲೋಕಾಯುಕ್ತ ಪೊಲೀಸರು ಮಾಡಿರುತ್ತಾರೆ.

ತನಿಖೆಯ ಉದ್ದೇಶಕ್ಕಾಗಿ ಪರಿಶೀಲನಾ ಅವಧಿಯನ್ನು 01–01–1982 ರಿಂದ ದಿನಾಂಕ: 09–06–2006 ರವರೆಗೆ ನಿಗದಿಪಡಿಸಲಾಗಿದೆ. ತನಿಖೆಯು ಪೂರ್ಣಗೊಂಡ ನಂತರ ಆಪಾದಿತರ ಮತ್ತು ಅವರ ಕುಟುಂಬ ವರ್ಗದವರ ವಶದಲ್ಲಿದ್ದ ಒಟ್ಟು ಆಸ್ತಿ, ಖರ್ಚು ಮತ್ತು ಆದಾಯಗಳ ಒಟ್ಟು ಮೊತ್ತವು ಈ ಕೆಳಕಂಡಂತೆ ಇರುತ್ತದೆ.

| ಕ್ರಮ ಸಂಖ್ಯೆ | ವಿವರಗಳು | ಮೌಲ್ಯ |
|---|---|---|
| 1) | ಆಪಾದಿತರು ಪರಿಶೀಲನಾ ಅವಧಿಯಲ್ಲಿ ಹೊಂದಿರುವ ಆಸ್ತಿಗಳ ಒಟ್ಟು ಮೊತ್ತ | 3,74,85,956–00 |
| 2) | ಆಪಾದಿತರು ಪರಿಶೀಲನಾ ಅವಧಿಯಲ್ಲಿ ಮಾಡಿರುವ ಖರ್ಚುಗಳ ಒಟ್ಟು ಮೊತ್ತ | 98,11,707–00 |
| 3) | ಆಪಾದಿತರು ಪರಿಶೀಲನಾ ಅವಧಿಯಲ್ಲಿ ಹೊಂದಿರುವ ಆಸ್ತಿ ಮತ್ತು ಖರ್ಚುಗಳು ಒಟ್ಟು ಮೊತ್ತ | 4,72,97,663–00 |
| 4) | ಆಪಾದಿತರು ಪರಿಶೀಲನಾ ಅವಧಿಯಲ್ಲಿ ಗಳಿಸಿರುವ ಆದಾಯದ ಒಟ್ಟು ಮೊತ್ತ | 1,99,92,123–00 |
| 5) | ಆಪಾದಿತ ಅಧಿಕಾರಿಯು ತಮ್ಮ ಗೊತ್ತಾದ ಆದಾಯಕ್ಕಿಂತಲೂ ಹೆಚ್ಚುವರಿಯಾಗಿ ಹೊಂದಿರುವ ಆಸ್ತಿಗಳ ಒಟ್ಟು ಮೌಲ್ಯ, | 2,73,05,540–00 |
| 6) | ಅಸಮತೋಲನ ಪ್ರಮಾಣದ ಆಸ್ತಿಗಳ ಶೇಕಡವಾರು | 136.58% |

ಮೇಲ್ಕಂಡ ವಿವರಗಳಿಂದ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಪಿ.ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಮೊಬೈಲ್ ಚೆಕ್ ಪೋಸ್ಟ್, ಕೋರಮಂಗಲ, ಬೆಂಗಳೂರುರವರು ತಮ್ಮ ಎಲ್ಲಾ ಮೂಲ ಆದಾಯಕ್ಕಿಂತ ರೂ. 2,73,05,540–00 ಅಂದರೆ ಶೇಕಡ 136.58% ರಷ್ಟು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂಬುದು ತನಿಖೆಯಿಂದ ಕಂಡುಬಂದಿದ್ದು, ಆಪಾದಿತರು ಭ್ರಷ್ಟಾಚಾರ ಪ್ರತಿಬಂದ ಕಾಯ್ದೆ 1988ರ ಕಲಂ 13(1)(ಇ) ಸಹವಾಚನ 13(2) ರಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಆದಕಾರಣ, ಆಪಾದಿತರನ್ನು ಭ್ರಷ್ಟಾಚಾರ ಪ್ರತಿಬಂದ ಕಾಯ್ದೆ 1988ರ ಕಲಂ 13(1)(ಇ) ಸಹವಾಚನ 13(2) ರಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸಾಕ್ಷಿ ಪುರಾವೆಗಳು ಲಭ್ಯವಿರುತ್ತದೆಂದು ಲೋಕಾಯುಕ್ತ ಪೊಲೀಸರು ತಿಳಿಸಿರುತ್ತಾರೆ.

ಆದ್ದರಿಂದ ಭ್ರಷ್ಟಾಚಾರ ಪ್ರತಿಬಂದ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಆಪಾದಿತ ಅಧಿಕಾರಿಯಾದ ಶ್ರೀ ಪಿ.ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ಮೊಬೈಲ್ ಚೆಕ್‌ಪೋಸ್ಟ್, ಕೋರಮಂಗಲ, ಬೆಂಗಳೂರುರವರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡುವಂತೆ ಅಪರ ಪೊಲೀಸ್ ಮಹಾನಿರ್ದೇಶಕರು ಕೋರಿದ್ದರು. ಅದರಂತೆ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (4)ರ ಆದೇಶವನ್ನು ಹೊರಡಿಸಲಾಗಿತ್ತು.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ: (5)ರ ಅಪರ ಪೊಲೀಸ್ ಮಹಾನಿರ್ದೇಶಕರ ಪತ್ರ ದಿನಾಂಕ: 04–09–2010 ರಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಆಇ 13 ವಾತೆತ 2007 ದಿನಾಂಕ: 17–08–2010 ರಲ್ಲಿ ಕೆಲವೊಂದು ನ್ಯೂನತೆಗಳು ಕಂಡುಬಂದಿದ್ದು, ಅದನ್ನು ಸರಿಪಡಿಸಿ ಪರಿಷ್ಕೃತ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡುವಂತೆ ಕೋರಿರುತ್ತಾರೆ.

ಆರೋಪಿತ ಅಧಿಕಾರಿಯು ತನ್ನ ಸರ್ಕಾರಿ ಸೇವಾವಧಿಯಲ್ಲಿ ಅಕ್ರಮ ಮಾರ್ಗಗಳನ್ನು ಅನುಸರಿಸಿ ತನ್ನ ಬಲ್ಲ ಮೂಲಗಳ ಆದಾಯಕ್ಕಿಂತ ರೂ.2,73,05,540/– ರಷ್ಟು ಅಸಮತೋಲನ ಪ್ರಮಾಣದ ಆಸ್ತಿಗಳನ್ನು ಹೊಂದಿರುವುದು ದೃಢಪಟ್ಟಿದ್ದು, ಇದರಿಂದ ಆಪಾದಿತರು ಭ್ರಷ್ಟಾಚಾರ ಪ್ರತಿಬಂಧ

ಕಾಯ್ದೆ 1988ರ ಕಲಂ 13(1)(ಇ) ಪ್ರಕಾರ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ದೃಢಪಟ್ಟಿರುತ್ತದೆ. ಆರೋಪಿತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ವಿಪುಲವಾದ ಸಾಕ್ಷ್ಯಾಧಾರಗಳಿರುತ್ತದೆ. ಅಪರ ಪೊಲೀಸ್ ಮಹಾ ನಿರ್ದೇಶಕರ ಪತ್ರ ದಿನಾಂಕ: 04–09–2010ನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಪರಿಷ್ಕೃತ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 13 ವಾತೆತ 2006 ಬೆಂಗಳೂರು, ದಿನಾಂಕ : 04–10–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಆಪಾದಿತ ಅಧಿಕಾರಿಯಾದ ಶ್ರೀ ಪಿ.ರಂಗಸ್ವಾಮಿ, ವಾಣಿಜ್ಯ ತೆರಿಗೆ ಅಧಿಕಾರಿ, ವಾಣಿಜ್ಯ ತೆರಿಗೆ ಇಲಾಖೆ, ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 13(1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ–19 ರನ್ವಯ ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ: 04–10–2010 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಆರ್.ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2).

ಪಿ.ಆರ್. 2605

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ RIDF-XVI ರಡಿ ಅನುಮೋದನೆಗೊಂಡಿರುವ ಕಾಮಗಾರಿಗಳ ಅಂದಾಜು ಪಟ್ಟಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಪತ್ರ ಸಂಖ್ಯೆ: FD/42/CIF/ 2009 ದಿನಾಂಕ: 26.04.2010.
2. ದಿನಾಂಕ: 28.07.2010ರ ನಬಾರ್ಡ್ ಸಂಸ್ಥೆಯ ಪತ್ರ ಸಂಖ್ಯೆ: NB/SPD/1006/RIDF-XVI/ (Karnataka RO)/110 PSC/2010-11
3. ಪತ್ರ ಸಂಖ್ಯೆ: FD/28/GIE/ 2010 ದಿನಾಂಕ: 05.07.2010.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ(1) ರ ಆರ್ಥಿಕ ಇಲಾಖೆ ಪತ್ರದಲ್ಲಿ ಆರ್.ಐ.ಡಿ.ಎಫ್. XVI ರಡಿಯಲ್ಲಿ, ನಬಾರ್ಡ್‌ನಿಂದ ಸಾಲ ಪಡೆಯಲು ಹಾಗೂ ಯೋಜನೆಗಳನ್ನು ಪರಿಗಣಿಸಲು ರಚಿಸಲಾಗಿರುವ ಸಚಿವ ಸಂಪುಟ ಉಪ ಸಮಿತಿಯಿಂದ ಅನುಮೋದನೆ ಪಡೆದು ಆರ್.ಐ.ಡಿ.ಎಫ್.– XVI ರಡಿ ಸಣ್ಣ ನೀರಾವರಿ ಇಲಾಖೆಗೆ ನೀಡಲಾದ ರೂ. 50.00 ಕೋಟಿ Sectoral Allocation ಮೊತ್ತಕ್ಕೆ ಸಣ್ಣ ನೀರಾವರಿ ಕಾಮಗಾರಿಗಳಿಗೆ, ಸಾಲ ಮಂಜೂರಾತಿ ನೀಡುವಂತೆ, ತಿಳಿಸಿ, ಅನುಮೋದಿತ ಕಾಮಗಾರಿಗಳ ಪಟ್ಟಿಯನ್ನು ನಬಾರ್ಡ್ ಸಂಸ್ಥೆಗೆ ಕಳುಹಿಸಲಾಗಿದೆ. ಅದರಂತೆ ಕಾಮಗಾರಿಗಳ ವಿವರವಾದ ಅಂದಾಜು ಪಟ್ಟಿಗಳನ್ನು ತಯಾರಿಸಿ ಆರ್.ಐ.ಡಿ.ಎಫ್.– XVI ರಡಿ ಸಾಲ ಸೌಲಭ್ಯ ಮಂಜೂರಾತಿಗಾಗಿ ಪ್ರಸ್ತಾವನೆಯನ್ನು ನಬಾರ್ಡ್ ಸಂಸ್ಥೆಗೆ ಕಳುಹಿಸಲಾಗಿದೆ. ನಬಾರ್ಡ್ ಸಂಸ್ಥೆಯು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಆರ್.ಐ.ಡಿ.ಎಫ್– 16ರ ಅಡಿಯಲ್ಲಿ ರೂ. 4994.97 ಲಕ್ಷ ಅಂದಾಜು ಮೊತ್ತದ 66 ಕಾಮಗಾರಿಗಳ ಅಂದಾಜುಗಳಿಗೆ ಒಟ್ಟು ರೂ. 4745.22 ಲಕ್ಷ ಸಾಲ ಸೌಲಭ್ಯವನ್ನು ಮಂಜೂರು ಮಾಡಲಾಗಿದೆ.

ಉಲ್ಲೇಖ (3) ರಲ್ಲಿರುವ, ನಬಾರ್ಡ್ ಸಂಸ್ಥೆಗೆ ಹೆಸರಿಸಿರುವ ಆರ್ಥಿಕ ಇಲಾಖೆಯ ಪತ್ರದಲ್ಲಿ ಅನುಮೋದನೆಯಾಗಿರುವ ಕಾಮಗಾರಿಗಳಿಗೆ ಸಾಲ ಸೌಲಭ್ಯ ಪಡೆಯಲು ಅವಶ್ಯವಿರುವ ಪ್ರಮಾಣ ಪತ್ರವನ್ನು ಮೇಲು ಸಹಿ ಮಾಡಿ ನಬಾರ್ಡ್ ಸಂಸ್ಥೆಗೆ ಹಿಂದಿರುಗಿಸಲಾಗಿದೆ.

ನಬಾರ್ಡ್ ಸಂಸ್ಥೆಯು ಸಾಲ ಮಂಜೂರಾತಿ ದೊರಕಿರುವ ಅನುಬಂಧದಲ್ಲಿ ತಿಳಿಸಿರುವ 66 ಕಾಮಗಾರಿಗಳ ಪೈಕಿ ಕೆಳಕಂಡ ಕಾಮಗಾರಿಗಳಿಗೆ ಈಗಾಗಲೇ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ವಿವರಗಳು ಕೆಳಕಂಡಂತಿವೆ.

ರೂ. ಲಕ್ಷಗಳಲ್ಲಿ

| ಅನುಬಂಧ ದಲ್ಲಿನ ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ನಬಾರ್ಡ್ ಸಂಸ್ಥೆಯಿಂದ ಅನುಮೋದಿಸಿದ ಅಂದಾಜು ಮೊತ್ತ | ಆಡಳಿತಾತ್ಮಕ ಅನುಮೋದನೆ ನೀಡಿರುವ ವಿವರ | |
|---|---|---|---|---|
| | | | ಅಂದಾಜು ಮೊತ್ತ | ಆದೇಶ ಸಂಖ್ಯೆ |
| 1 | ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕು ಬೆನಕನಹಳ್ಳಿ ಸೈಟ್–2 ಹತ್ತಿರ ಹಳ್ಳಕ್ಕೆ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ | 185.00 | 185.00 | ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009 ಭಾಗ–1(2) ದಿನಾಂಕ: 16.02.2009 |
| 4 | ಬಾಗಲಕೋಟೆ ಜಿಲ್ಲೆ ಹಾಗೂ ತಾಲ್ಲೂಕಿನ ಮುಗಳಳ್ಳಿ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಏತ ನೀರಾವರಿ ಯೋಜನೆ | 1854.00 | 1500.00 | ಸರ್ಕಾರದ ಆದೇಶ ಸಂಖ್ಯೆ ಸನೀಇ 59 ಏನೀಯೋ 2008 ದಿನಾಂಕ: 17.01.2009 |
| 14 | ಹಾವೇರಿ ಜಿಲ್ಲೆ ಹಾನಗಲ್ ತಾಲ್ಲೂಕಿನ ಮಕರವಳ್ಳಿ ಏತ ನೀರಾವರಿ ಯೋಜನೆ ನಿರ್ಮಾಣ | 1000.00 | 650.00 | ಸರ್ಕಾರದ ಆದೇಶ ಸಂಖ್ಯೆ: ಸನೀಇ 30 ಏನೀಯೋ 2007 ದಿನಾಂಕ: 17.12.2007 |
| 28 | ದಾವಣಗೆರೆ ಜಿಲ್ಲೆ ಹಾಗೂ ತಾಲ್ಲೂಕಿನ | 100.00 | 266.00 | ಸರ್ಕಾರದ ಆದೇಶ ಸಂಖ್ಯೆ: ಸನೀಇ |

| | | | | |
|---|---|---|---|---|
| | ಕೊಡಗನೂರು ಕೆರೆ ಏರಿಯ ಕುಸಿದ ಭಾಗವನ್ನು ಯಥಾಸ್ಥಿತಿಗೆ ತರುವ ಕಾಮಗಾರಿಯ | | | 01 ಕೆಜಿದು(ತಾಂತ್ರಿಕ) 201 ದಿನಾಂಕ: 26.03.2010. |
| 32 | ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕಿನ ಚಿತ್ರಭಾನುಕೋಟೆ ಹತ್ತಿರ ಇಂಗು ಕೆರೆ ನಿರ್ಮಾಣ | 28.50 | 29.99 | ಮುಖ್ಯ ಇಂಜಿನಿಯರ್ ಬಿಜಾಪುರ ಇವರ ಆದೇಶ ಸಂ:ಮುಇಂ/ ಸನೀ (ಉ)ವ/ಬಿಜೆಪಿ/ನ.ಇಂ–6/2008–09/ 84 ದಿನಾಂಕ: 06–01–2009 |
| | | **3167.50** | | |

ಮೇಲ್ಕಂಡ ಕಾಮಗಾರಿಗಳ ಅಂದಾಜುಗಳನ್ನು ಹೊರತುಪಡಿಸಿ ನಬಾರ್ಡ್ ಸಂಸ್ಥೆಯು ಸಾಲ ಮಂಜೂರಾತಿ ನೀಡಿರುವ ಉಳಿದ ಎಲ್ಲಾ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

ಮೇಲೆ ತಿಳಿಸಿರುವ 5 ಕಾಮಗಾರಿಗಳನ್ನು ಹೊರತುಪಡಿಸಿ ಬಾಕಿ ಉಳಿದ 61 ಕಾಮಗಾರಿಗಳ ಅಂದಾಜು ಮೊತ್ತ ಒಟ್ಟು ರೂ.1827.47 ಲಕ್ಷ ಇದ್ದು ಅವುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ನಯೋಕಾ 2010, ಬೆಂಗಳೂರು, ದಿನಾಂಕ : 20ನೇ ಅಕ್ಟೋಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿಗೆ ನಬಾರ್ಡ್‌ನ ಆರ್.ಐ.ಡಿ.ಎಫ್.– XVI ರಡಿ ಸಾಲ ಮಂಜೂರಾತಿ ದೊರಕಿರುವ 66 ಕಾಮಗಾರಿಗಳ ಪೈಕಿ, ರೂ.1827.47 ಲಕ್ಷ (ರೂ. ಹದಿನೆಂಟು ಕೋಟಿ ಇಪ್ಪತ್ತೇಳು ಲಕ್ಷ ನಲವತ್ತೇಳು ಸಾವಿರ ಮಾತ್ರ) ಅಂದಾಜು ಮೊತ್ತವುಳ್ಳ 61 ಕಾಮಗಾರಿಗಳ ಅಂದಾಜುಗಳಿಗೆ (ಅನುಬಂಧದಲ್ಲಿನ ಕ್ರಮ ಸಂಖ್ಯೆ 1, 4, 14, 28 ಹಾಗೂ ಕ್ರಮ ಸಂಖ್ಯೆ 32 ರ ಕಾಮಗಾರಿಗಳನ್ನು ಹೊರತು ಪಡಿಸಿ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ತಾಂತ್ರಿಕ ಮಂಜೂರಾತಿಯನ್ನು ಸೂಕ್ತವಾದ ಲೆಕ್ಕಶೀರ್ಷಿಕೆ/ಉಪ ಲೆಕ್ಕಶೀರ್ಷಿಕೆಯಡಿ ನೀಡುವುದು. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.

2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.

3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪ್ರಸ್ತಾವನೆಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.

4) ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಅಥವಾ ಮುಖ್ಯ ಇಂಜಿನಿಯರ್‌ಗಳ ನೇತೃತ್ವದಲ್ಲಿ ಇರುವ ತಾಂತ್ರಿಕ ಸಮಿತಿಯ ತೀರುವಳಿಯನ್ನು ನಿಯಮಾನುಸಾರ ಪಡೆಯುವುದು.

5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.

6) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.

7) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.

8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.

9) ಕಾವೇರಿ ಕೊಳ್ಳದಲ್ಲಿ ಬರುವ ಯೋಜನೆಗಳ ಅನುಷ್ಠಾನವು ಕಾವೇರಿ ನ್ಯಾಯಾಧಿಕರಣದ ಆದೇಶಗಳಿಗೆ ವ್ಯತಿರಿಕ್ತವಾಗಬಾರದು.

10) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.

11) ನೇರ ಅಚ್ಚುಕಟ್ಟು ಹೊಂದಿರುವ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2606

# Annexure I

State : Karnataka

## Financial Details and Phasing of MI projects - RIDF XVI - Phase I (WRD-MI) - Flood Affected districts

(Rs. in lakh)

| RO Code | Sl No | Name of the Project | Taluk | District | Type | Irrign. Potetial CCA (ha) | Updated Project Cost | Expn. upto 31.03.10 | Cost of inelgibl items | Balance Eligible cost | RIDF XVI loan 2010-11 | RIDF XVI loan 2011-12 | Total | State govt., Contn. |
|---|---|---|---|---|---|---|---|---|---|---|---|---|---|---|
| I16001 | 1 | Const of Barrage across Dodda Halla at Benakanahalli Site 2 | Indi | Bijapur | Barrage | 175 | 185.00 | 0.00 | 0.00 | 185.00 | 87.88 | 87.87 | 175.75 | 9.25 |
| I16002 | 2 | Const of Barrage across Doddahalla near Kudal of Tamba Tanda | Indi | Bijapur | Barrage | 181 | 200.00 | 0.00 | 0.00 | 200.00 | 95.00 | 95.00 | 190.00 | 10.00 |
| I16003 | 3 | Const of Bandara near Jalageri - Dhoklewadi (Site 3) | Bijapur | Bijapur | Barrage | 49 | 49.97 | 0.00 | 0.00 | 49.97 | 23.74 | 23.73 | 47.47 | 2.50 |
| I16004 | 4 | Const of LI Scheme Ghataprabha river near Mugalalli | Bagalkot | Bagalkot | LIS | 1500 | 1854.00 | 0.00 | 0.00 | 1854.00 | 880.65 | 880.65 | 1761.30 | 92.70 |
| I16005 | 5 | Impt to LIS at Siddanakolla | Hungund | Bagalkot | LIS | 197 | 30.00 | 0.00 | 0.00 | 30.00 | 14.25 | 14.25 | 28.50 | 1.50 |
| I16006 | 6 | Impt to LIS at Allur | Badami | Bagalkot | LIS | 107 | 50.00 | 0.00 | 0.00 | 50.00 | 23.75 | 23.75 | 47.50 | 2.50 |
| I16007 | 7 | Protection work to Pump House & repairs to PH of LIS Hirehadagali | Bellary | Bellary | LIS | 24.00 | 22.50 | 0.00 | 0.00 | 22.50 | 10.69 | 10.69 | 21.38 | 1.12 |
| I16008 | 8 | Protection work to Pumphouse of LIS Benakal | Bellary | Bellary | LIS | 24.00 | 15.00 | 0.00 | 0.00 | 15.00 | 7.13 | 7.12 | 14.25 | 0.75 |
| I16009 | 9 | Repairs to damaged portion of nala bank & protection to upstream of nala near LIS Darur village | Siruguppa | Bellary | LIS | 15.00 | 13.40 | 0.00 | 0.00 | 13.40 | 6.37 | 6.36 | 12.73 | 0.67 |
| I16010 | 10 | Protection work to Intake channel and Pump House and repairs to PH and Elec. room of LIS Mylara - I | H.Hadagali | Bellary | LIS | 32.00 | 20.00 | 0.00 | 0.00 | 20.00 | 9.50 | 9.50 | 19.00 | 1.00 |
| I16011 | 11 | Providing protection work to intake channel and Pump House of LIS Rajwala | H.Hadagali | Bellary | LIS | 24.00 | 18.00 | 0.00 | 0.00 | 18.00 | 8.55 | 8.55 | 17.10 | 0.90 |
| I16012 | 12 | Const of BCB across Huvinahalla on the road between Gaddikaravinakoppa & Mutnal village | Belgaum | Belgaum | BCB | 40.00 | 49.00 | 0.00 | 0.00 | 49.00 | 23.28 | 23.27 | 46.55 | 2.45 |
| I16013 | 13 | Protection works to Hulikeri MI tank | Dharwad | Dharwad | MOT | 40.00 | 26.00 | 0.00 | 0.00 | 26.00 | 12.35 | 12.35 | 24.70 | 1.30 |
| I16014 | 14 | Const of LIS at Makaravalli village | Hangal | Haveri | LIS | 938.00 | 1000.00 | 0.00 | 0.00 | 1000.00 | 475.00 | 475.00 | 950.00 | 50.00 |
| I16015 | 15 | Const of Bailpal Barrage at Sahasralli (near Timmanna Bhat House) | Yellapur | U. Kannada | BCB | 7.00 | 12.00 | 0.00 | 0.00 | 12.00 | 5.70 | 5.70 | 11.40 | 0.60 |
| I16016 | 16 | Const of Appegundi Barrage at Bigar in Vazralli panchayat | Yellapur | U. Kannada | BCB | 14.00 | 16.00 | 0.00 | 0.00 | 16.00 | 7.60 | 7.60 | 15.20 | 0.80 |
| I16017 | 17 | Restoration of PH of LIS Vyasanakere 1st & and 2nd stage | Hospet | Bellary | LIS | 12.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| I16018 | 18 | Const of Bandara & Canal to Ndajjigadde Totadkasage halla at Badal Panchayat | Sirsi | U. Kannada | BCB | 31.00 | 30.00 | 0.00 | 0.00 | 30.00 | 14.25 | 14.25 | 28.50 | 1.50 |
| I16019 | 19 | FPW at Bhadrapur Sy No. 6 near halla | Sirsi | U. Kannada | FPW | 20.00 | 20.00 | 0.00 | 0.00 | 20.00 | 9.50 | 9.50 | 19.00 | 1.00 |
| I16020 | 20 | Const of Bandara near Harepal | Sirsi | U. Kannada | BCB | 17.00 | 23.50 | 0.00 | 0.00 | 23.50 | 11.16 | 11.16 | 22.32 | 1.18 |
| I16021 | 21 | Repairs to canals of LIS Kataraki | Koppal | Koppal | LIS | 20.00 | 13.00 | 0.00 | 0.00 | 13.00 | 6.18 | 6.17 | 12.35 | 0.65 |
| I16022 | 22 | Mundargi site No. 1 LIS - impvt to irrigation canals | Koppal | Koppal | LIS | 10.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| I16023 | 23 | Karkihalli LIS - impvt to irrigation canals | Koppal | Koppal | LIS | 21.00 | 8.00 | 0.00 | 0.00 | 8.00 | 3.80 | 3.80 | 7.60 | 0.40 |
| I16024 | 24 | Gondabal LIS - repairs of irrigation canals and raising main | Koppal | Koppal | LIS | 22.00 | 22.00 | 0.00 | 0.00 | 22.00 | 10.45 | 10.45 | 20.90 | 1.10 |
| I16025 | 25 | Hirebagnal LIS - imopvt to irrigation canals | Koppal | Koppal | LIS | 10.00 | 7.20 | 0.00 | 0.00 | 7.20 | 3.42 | 3.42 | 6.84 | 0.36 |
| I16026 | 26 | Mattur LIS Repairs to canals | Koppal | Koppal | LIS | 10.00 | 7.40 | 0.00 | 0.00 | 7.40 | 3.52 | 3.51 | 7.03 | 0.37 |
| I16027 | 27 | Jukur LIS - Restoration | Manvi | Raichur | LIS | 18.00 | 14.40 | 0.00 | 0.00 | 14.40 | 6.84 | 6.83 | 13.67 | 0.73 |
| I16028 | 28 | Kodaganuru tank- bund chanal & toe drain | Davangere | Davangere | MOT | 220.00 | 100.00 | 0.00 | 0.00 | 100.00 | 47.50 | 47.50 | 95.00 | 5.00 |
| I16029 | 29 | Kerehalli tank - repairs to breached [illegible] bund | Koppal | Koppal | MOT | 41.00 | 25.00 | 0.00 | 0.00 | 25.00 | 11.88 | 11.87 | 23.75 | 1.25 |
| I16030 | 30 | Nilavanji LIS - rejuvenation | Deodurg | Raichur | LIS | 18.00 | 17.30 | 0.00 | 0.00 | 17.30 | 8.22 | 8.21 | 16.43 | 0.87 |
| I16031 | 31 | Lingapur LIS - improvements | Bilagi | Bagalkot | LIS | 50.00 | 30.00 | 0.00 | 0.00 | 30.00 | 14.25 | 14.25 | 28.50 | 1.50 |
| I16032 | 32 | PT near Chitrabanukote village- const. [illegible] | Mudhol | Bagalkot | PT | 40.00 | 28.50 | 0.00 | 0.00 | 28.50 | 13.54 | 13.53 | 27.07 | 1.43 |
| I16034 | 33 | Janamatti & Sunag Tanda - const. of LIS | Bilagi | Bagalkot | LIS | [illegible] | 660.00 | 0.00 | 0.00 | 660.00 | 313.50 | 313.50 | 627.00 | 33.00 |

| | | | | | | | | | | | | | | | |
|---|---|---|---|---|---|---|---|---|---|---|---|---|---|---|---|
| | 34 | Adihudi Todalbagi LIS - improvements | Jamakandi | Bagalkot | LIS | 60.00 | 38.00 | 0.00 | 0.00 | 38.00 | 18.05 | 18.05 | 36.10 | 1.90 |
| [illegible] | 35 | Bhatrahalli tank - repairs to feeder channel | Molakalmuru | chitradurga | Feeder | 5.00 | 5.00 | 0.00 | 0.00 | 5.00 | 2.38 | 2.37 | 4.75 | 0.25 |
| …037 | 36 | Chikkenahalli tank - repairs to feeder channel | Molakalmuru | Chitradurga | Feeder | 5.00 | 5.00 | 0.00 | 0.00 | 5.00 | 2.39 | 2.37 | 4.75 | 0.25 |
| 116038 | 37 | Amakundi tank - repairs to feeder channel | Molakalmuru | Chitradurga | Feeder | 10.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 116039 | 38 | Nagasamudra tank - Repairs to feeder channel | Molakalmuru | Chitradurga | Feeder | 5.00 | 5.00 | 0.00 | 0.00 | 5.00 | 2.38 | 2.37 | 4.75 | 0.25 |
| 116040 | 39 | Parashrampura new tank- repairs to left bank sluice | Challakere | Chitradurga | MOT | 5.00 | 5.00 | 0.00 | 0.00 | 5.00 | 2.38 | 2.37 | 4.75 | 0.25 |
| 116041 | 40 | Sondekola tank - const of damaged feeder channel | Chitradurga | Chitradurga | Feeder | 20.00 | 7.00 | 0.00 | 0.00 | 7.00 | 3.33 | 3.32 | 6.65 | 0.36 |
| 116042 | 41 | Sultanipura Tank- repairs to feeder channel | Chitradurga | Chitradurga | Feedeer | 10.00 | 4.30 | 0.00 | 0.00 | 4.30 | 2.04 | 2.05 | 4.09 | 0.21 |
| 116043 | 42 | Kodagavalli tank - repairs to feeder channel | Chitradurga | Chitradurga | Feeder | 14.00 | 4.20 | 0.00 | 0.00 | 4.20 | 2.00 | 1.99 | 3.99 | 0.21 |
| 116044 | 43 | Bharamasagara Doddakere Tank - repairs to sluice | Chitradurga | Chitradurga | MOT | 10.00 | 8.70 | 0.00 | 0.00 | 8.70 | 4.13 | 4.14 | 8.27 | 0.43 |
| 116045 | 44 | Sujikalamaanikere tank - repairs to bund & waste weir | Hosadurga | Chitradurga | MOT | 26.00 | 9.50 | 0.00 | 0.00 | 9.50 | 4.51 | 4.52 | 9.03 | 0.47 |
| 116046 | 45 | Ganjigere tank - repairs to bund & waste weir | Hosadurga | Chitradurga | MOT | 19.00 | 4.30 | 0.00 | 0.00 | 4.30 | 2.04 | 2.05 | 4.09 | 0.21 |
| 116047 | 46 | Ajjikamsagara Dalavaikatte tank - repairs to bund & wasteweir | Hosadurga | Chitradurga | MOT | 10.00 | 4.80 | 0.00 | 0.00 | 4.80 | 2.28 | 2.28 | 4.56 | 0.24 |
| 116048 | 47 | Belaguru Feeder Nala | Hosadurga | Chitradurga | Feeder | 36.00 | 9.00 | 0.00 | 0.00 | 9.00 | 4.28 | 4.27 | 8.55 | 0.45 |
| 116049 | 48 | Dodderi tank - repairs to bund, sluice and feeder canal | Challakere | Chitradurga | Feeder | 29.00 | 5.00 | 0.00 | 0.00 | 5.00 | 2.38 | 2.37 | 4.75 | 0.25 |
| 116050 | 49 | Narayanapura Tank - from Ch 0.. to 2.10 Km - repairs to PBC | Hiriyuru | Chitradurga | MOT | 42.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 116051 | 50 | Narayanapura Tank - From Ch 2.10 to 4.5 km-repairs to RBC | Hiriyuru | Chitradurga | MOT | 36.00 | 9.00 | 0.00 | 0.00 | 9.00 | 4.28 | 4.27 | 8.55 | 0.45 |
| 116052 | 51 | Narayanapura Tank - Ch 6.00 to 22.00 km - repairs to RBC | Hiriyuru | Chitradurga | MOT | 20.00 | 4.50 | 0.00 | 0.00 | 4.50 | 2.14 | 2.14 | 4.28 | 0.22 |
| 116053 | 52 | Narayanapura Tank - Ch 22.00 to 28.00km - repairs to PBC. | Hiriyuru | Chitradurga | MOT | 18.00 | 6.00 | 0.00 | 0.00 | 6.00 | 2.85 | 2.85 | 5.70 | 0.30 |
| 116054 | 53 | Narayanapura Tank - Ch 28.00 to 40.00 km- repairs to RBC | Hiriyuru | Chitradurga | MOT | 25.00 | 10.00 | 0.00 | 0.00 | 10.00 | 4.75 | 4.75 | 9.50 | 0.50 |
| 116055 | 54 | Gunderi Tank - reconstruction of damaged wasteweir | Holalkere | Chitradurga | MOT | 36.00 | 9.70 | 0.00 | 0.00 | 9.70 | 4.61 | 4.61 | 9.22 | 0.48 |
| 116056 | 55 | Kagalagere tank - reconst of wasteweir | Holalkere | Chitradurga | MOT | 40.00 | 20.00 | 0.00 | 0.00 | 20.00 | 9.50 | 9.50 | 19.00 | 1.00 |
| 116057 | 56 | Chikkayemmiganuru tank - repairs damaged bund | Holalkere | Chitradurga | MOT | 15.00 | 5.00 | 0.00 | 0.00 | 5.00 | 2.38 | 2.37 | 4.75 | 0.25 |
| 116058 | 57 | Talikatte tank - repairs damaged sluice | Holalkere | Chitradurga | MOT | 25.00 | 5.00 | 0.00 | 0.00 | 5.00 | 2.38 | 2.37 | 4.75 | 0.25 |
| 116059 | 58 | Sowlanga new tank - repairs to waste weir & sluices | Honnali | Davangere | MOT | 20.00 | 20.00 | 0.00 | 0.00 | 20.00 | 9.50 | 9.50 | 19.00 | 1.00 |
| 116060 | 59 | Neelagunda tank - repairs to feeder canal | Harapanahalli | Davangere | Feeder | 55.00 | 19.30 | 0.00 | 0.00 | 19.30 | 9.17 | 9.17 | 18.34 | 0.96 |
| 116061 | 60 | Gadimakunte tank - arresting piping action in bund | Jagalur | Davangere | MOT | 34.00 | 32.50 | 0.00 | 0.00 | 32.50 | 15.44 | 15.43 | 30.87 | 1.63 |
| 116063 | 61 | Kulenuru Doddakere - repairs to bund | Channagiri | Davangere | MOT | 20.00 | 20.00 | 0.00 | 0.00 | 20.00 | 9.50 | 9.50 | 19.00 | 1.00 |
| 116066 | 62 | Kattige tank - repairs to waste weir & atchcut road | Honnali | Davangere | MOT | 35.00 | 20.00 | 0.00 | 0.00 | 20.00 | 9.50 | 9.50 | 19.00 | 1.00 |
| 116067 | 63 | Varavu tank - repairs to bund and sluice | Challakere | Chitradurga | MOT | 10.00 | 5.00 | 0.00 | 0.00 | 5.00 | 2.38 | 2.37 | 4.75 | 0.25 |
| 116068 | 64 | Jaladurga LIS - Impvt | Lingasugur | Raichur | LIS | 18.00 | 22.00 | 0.00 | 0.00 | 22.00 | 10.45 | 10.45 | 20.90 | 1.10 |
| 116069 | 65 | Akkimardi-Nagaral - BCB | Mudhol | Bagalkot | BCB | 40.00 | 59.00 | 0.00 | 0.00 | 59.00 | 28.02 | 28.02 | 56.04 | 2.96 |
| 116073 | 66 | Damaged sluice of J N Kote - reconstruction | Chitradurga | Chitradurga | MOT | 30.00 | 6.00 | 0.00 | 0.00 | 6.00 | 2.85 | 2.85 | 5.70 | 0.30 |
| | | **GRAND TOTAL** | | | | 5050.00 | 4994.97 | 0.00 | 0.00 | 4994.97 | 2372.71 | 2372.51 | 4745.22 | 249.75 |

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕಿನ ಮುಕ್ತಿ ಹರಿಹರಪುರ ಗ್ರಾಮದ ಹತ್ತಿರ ಪಿಕಪ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು (ಇಂಡೆಂಟ್ ನಂ.1026.)

**ಓದಲಾಗಿದೆ :** 1. ದಿನಾಂಕ: 06/01/10ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 06 ಯೋಕಾ 2009.

2. ದಿನಾಂಕ: 27/08/10ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ನಿಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ತಾಂ–3/ಸ.ಇಂ–8/ಶಿವಮೊಗ್ಗ/ಇ–ಟೆಂಡರ್/2010–11/2590.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 30/09/10ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 09–10/2165.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಬಾರ್ಡ್ ಆರ್.ಐ.ಡಿ.ಎಫ್–15ರಲ್ಲಿ ರೂ.15045.45 ಲಕ್ಷ ಅಂದಾಜು ಮೊತ್ತದ 395 ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಕಾಮಗಾರಿಗಳಲ್ಲಿ 19.00 ಲಕ್ಷ ರೂ.ಗಳ ಅಂದಾಜಿನ ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕಿನ ಮುಕ್ತಿ ಹರಿಹರಪುರ ಗ್ರಾಮದ ಹತ್ತಿರ ಪಿಕಪ್ ನಿರ್ಮಾಣ ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | **ಜಿಲ್ಲಾ ಟೆಂಡರ್ ಬುಲೆಟಿನ್** | **ದಿ: 11/06/10** |
| 2 | **ಕನ್ನಡ ಪ್ರಭ ದಿನಪತ್ರಿಕೆ** | **ದಿ: 18/06/10** |

ಈ ಟೆಂಡರ್ ಕರೆಗೆ ಸ್ಪಂದಿಸಿ ಒಬ್ಬ ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಇ–ಟೆಂಡರಿಂಗ್ ಮೂಲಕ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ಟೆಂಡರ್‌ನ್ನು ತೆರೆಯಲಾಗಿದ್ದು, ಟೆಂಡರ್‌ನ ವಿವರ ಕೆಳಕಂಡಂತಿವೆ:

| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | | | **ರೂ. 17,54,683/–** | |
|---|---|---|---|---|
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | | | **ರೂ. 17,28,149/–** | |
| **ಕ್ರಮ ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
| 1 | ಆರ್. ರಾಜ್‌ಕುಮಾರ್<br>1ನೇ ದರ್ಜೆ ಗುತ್ತಿಗೆದಾರರು | ರೂ.21,66,739/– | 23.48 ಹೆಚ್ಚು | 25.38 ಹೆಚ್ಚು |

ಮೇಲ್ಕಂಡಂತೆ ಶ್ರೀ ಆರ್.ರಾಜ್‌ಕುಮಾರ್, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿರುವ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 25.38ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 27/08/10ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ: 28/08/10 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 17,28,149–00ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.19,44,168–00ಗಳಿಗೆ ಕಾಮಗಾರಿಯನ್ನು ಶ್ರೀ ಆರ್.ರಾಜ್‌ಕುಮಾರ್, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 29 ಅಪಿಬಂ 2010, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕಿನ ಮುಕ್ತಿ ಹರಿಹರಪುರ ಗ್ರಾಮದ ಹತ್ತಿರ ಪಿಕಪ್ ನಿರ್ಮಾಣ ಕಾಮಗಾರಿಯ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 17,28,149–00ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.19,44,168–00 ಗಳಿಗೆ (ಹತ್ತೊಂಭತ್ತು ಲಕ್ಷದ ನಲವತ್ನಾಲ್ಕು ಸಾವಿರದ ನೂರ ಅರವತ್ತೆಂಟು ರೂ.ಗಳು ಮಾತ್ರ) ಶ್ರೀ ಆರ್.ರಾಜ್‌ಕುಮಾರ್, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್ 2607 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕಿನ ಅಯ್ಯನಕೆರೆ ಹಾಗೂ ಸರಣಿಯ ಪುನರುಜ್ಜೀವನ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1. ದಿನಾಂಕ: 13/05/08ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2007.

2. ದಿನಾಂಕ: 17/08/10ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸದ/ತಾಂ-2/ಸ.ಇಂ-2/ಚಿಕ್ಕಮಗಳೂರು/ಕಡೂರು/ಅಯ್ಯನಕೆರೆ/ಇ-ಟೆಂಡರ್/2010/2523.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 30/09/10ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 09-10/2165.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಬಾರ್ಡ್ ಆರ್.ಐ.ಡಿ.ಎಫ್-13ರಲ್ಲಿ ರೂ.9036.60 ಲಕ್ಷ ಅಂದಾಜು ಮೊತ್ತದ 162 ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಈ ಕಾಮಗಾರಿಗಳಲ್ಲಿ 372.60 ಲಕ್ಷ ರೂ.ಗಳ ಅಂದಾಜಿನ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕಿನ ಅಯ್ಯನಕೆರೆ ಹಾಗೂ ಸರಣಿಯ ಪುನರುಜ್ಜೀವನ ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | **ದಿ ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆ** | **ದಿ:12/06/10** |
| 2 | **ಉದಯವಾಣಿ ಮತ್ತು ಪ್ರಜಾವಾಣಿ ದಿನಪತ್ರಿಕೆಗಳು** | **ದಿ:13/06/10** |
| 3 | **ಜಿಲ್ಲಾ ಟೆಂಡರ್ ಬುಲೆಟಿನ್** | **ದಿ:14/06/10** |
| 4 | **ರಾಜ್ಯ ಟೆಂಡರ್ ಬುಲೆಟಿನ್** | **ದಿ:17/06/10** |

ಈ ಟೆಂಡರ್ ಕರೆಗೆ ಸ್ಪಂದಿಸಿ 6 ಜನ ಗುತ್ತಿಗೆದಾರರು ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರಿನಲ್ಲಿ ಭಾಗವಹಿಸಿದ್ದು, ಈ ಪೈಕಿ 4 ಜನ ಗುತ್ತಿಗೆದಾರರು ಇ.ಎಂ.ಡಿ. ನೀಡದ ಕಾರಣ ಇವರ ತಾಂತ್ರಿಕ ಟೆಂಡರ್ ತಿರಸ್ಕರಿಸಿ ಉಳಿದ ಇಬ್ಬರ ತಾಂತ್ರಿಕ ಬಿಡ್‌ಗಳನ್ನು ದಿನಾಂಕ: 16/07/10 ರಂದು ತೆರೆಯಲಾಗಿದ್ದು, ಇದರಲ್ಲಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹರಾಗಿದ್ದು, ಇವರ ಆರ್ಥಿಕ ಬಿಡ್ಡನ್ನು ದಿನಾಂಕ: 28/07/10ರಂದು ತೆರೆಯಲಾಗಿದೆ. ಅವರು ನಮೂದಿಸಿರುವ ವಿವರ ಕೆಳಕಂಡಂತಿವೆ:

| | |
|---|---|
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | **ರೂ.3,68,89,984/-** |

| **ಕ್ರಮ ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
|---|---|---|---|
| 1 | ಎಸ್.ನಾರಾಯಣರೆಡ್ಡಿ,<br>1ನೇ ದರ್ಜೆ ಗುತ್ತಿಗೆದಾರರು | ರೂ.4,20,47,199/- | 13.98 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್.ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಅರ್ಹತೆ ಹೊಂದಿದ ಏಕೈಕ ಗುತ್ತಿಗೆದಾರರಾಗಿದ್ದು, ಇವರು ನಮೂದಿಸಿರುವ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 13.98ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 17/08/10ರ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ: 28/08/10 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 3,68,89,984-00ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.4,15,01,233-00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 43 ಕೆಜಿದು 2010, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕಿನ ಅಯ್ಯನಕೆರೆ ಹಾಗೂ ಸರಣಿಯ ಪುನರುಜ್ಜೀವನ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 3,68,89,984–00ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.4,15,01,233–00ಗಳಿಗೆ (ನಾಲ್ಕು ಕೋಟಿ ಹದಿನೈದು ಲಕ್ಷದ ಒಂದು ಸಾವಿರದ ಇನ್ನೂರ ಮೂವತ್ತ್ಮೂರು ರೂ.ಗಳು ಮಾತ್ರ) ಶ್ರೀ ಎಸ್.ನಾರಾಯಣರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2608 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕಿನ ಕೊಕಟನೂರ–ಚಿಕ್ಕಸಿಂಧಗಿ ರೈತರಿಗೆ ಸ.ನಂ.103, 93,/2 ಜಮೀನುಗಳಿಗೆ ಏತ ನೀರಾವರಿ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸುವ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1. ದಿನಾಂಕ: 27/07/10ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ನಿಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ಕೊಕಟನೂರ–ಚಿಕ್ಕಸಿಂಧಗಿ ಏನೀಯೋ/10–11/4257.

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ: 30/09/10ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ ಟೆಂಡರ್/ 09–10/2165.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕಿನ ಕೊಕಟನೂರ–ಚಿಕ್ಕಸಿಂಧಗಿ ರೈತರಿಗೆ ಸ.ನಂ.103, 93,/2 ಜಮೀನುಗಳಿಗೆ ಏತ ನೀರಾವರಿ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸುವ ಕಾಮಗಾರಿಯ 37.50 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | **ಸಂಯುಕ್ತ ಕರ್ನಾಟಕ ದಿನಪತ್ರಿಕೆ** | ದಿ: 07/04/10 |
| 2 | **ಜಿಲ್ಲಾ ಟೆಂಡರ್ ಬುಲೆಟಿನ್** | ದಿ: 13/04/10 |

ಈ ಟೆಂಡರ್ ಕರೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಇ–ಟೆಂಡರಿಂಗ್ ಮೂಲಕ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಟೆಂಡರನ್ನು ದಿನಾಂಕ: 15/05/2010ರಂದು ತೆರೆಯಲಾಗಿದ್ದು, ಅದರಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ವಿವರ ಕೆಳಕಂಡಂತಿವೆ:

| **ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ : ರೂ.33,46,940/ಗಳು** | | | |
|---|---|---|---|
| **ಕ್ರಮ ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
| 1 | ಎಸ್.ಕೆ.ರಾಠೋಡ, 1ನೇ ದರ್ಜೆ ಗುತ್ತಿಗೆದಾರರು | ರೂ.38,36,980/– | 14.64 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್.ಕೆ.ರಾಠೋಡ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.64ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ 1ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ: 28/08/10 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ

ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 33,46,940–00ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.37,82,042–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಕೆ.ರಾಠೋಡ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 43 ಏನೀಯೋ 2010, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕಿನ ಕೊಕಟನೂರ–ಚಿಕ್ಕಸಿಂಧಗಿ ರೈತರಿಗೆ ಸ.ನಂ.103, 93,/2 ಜಮೀನುಗಳಿಗೆ ಏತ ನೀರಾವರಿ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸುವ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 33,46,940–00ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.37,82,042–00ಗಳಿಗೆ (ಮೂವತ್ತೇಳು ಲಕ್ಷದ ಎಂಭತ್ತೆರಡು ಸಾವಿರದ ನಲವತ್ತೆರಡು ರೂ.ಗಳು ಮಾತ್ರ) ಶ್ರೀ ಎಸ್.ಕೆ.ರಾಠೋಡ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2609 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು, ನಂದೇಶ್ವರ ಗ್ರಾಮದ ಹತ್ತಿರ ಗಂಗಾಕಲ್ಯಾಣ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1. ದಿನಾಂಕ: 12/08/10ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಎಇ–1/2010–11/4630.

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ: 30/09/10ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 10–11/2165.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು, ನಂದೇಶ್ವರ ಗ್ರಾಮದ ಹತ್ತಿರ ಗಂಗಾಕಲ್ಯಾಣ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ 18.50 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ಆಡಳಿತಾತ್ಮಕ ಅನುಮೋದನೆ ನೀಡಿದ್ದು ಅಧೀಕ್ಷಕ ಇಂಜಿನಿಯರ್, ಬೆಳಗಾವಿ ವೃತ್ತ ರವರು ಕಛೇರಿ ನೋಂದಣಿ ಸಂಖ್ಯೆ:79/2009–10ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾಂ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | **ಜಿಲ್ಲಾ ಟೆಂಡರ್ ಬುಲೆಟಿನ್** | ದಿ: 24/05/10 |
| 2 | **ಸಂಯುಕ್ತ ಕರ್ನಾಟಕ ದಿನಪತ್ರಿಕೆ** | ದಿ: 02/06/10 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಇಬ್ಬರು ಗುತ್ತಿಗೆದಾರರು ಇ–ಟೆಂಡರಿಂಗ್ ಮೂಲಕ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುವುದಾಗಿ ವರದಿಯಾಗಿದೆ. ಇವರ ಟೆಂಡರ್‌ಗಳನ್ನು ದಿನಾಂಕ: 14/06/10ರಂದು ತೆರೆಯಲಾಗಿದ್ದು, ಇದರಲ್ಲಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹರಾಗಿದ್ದು, ಸದರಿ ಗುತ್ತಿಗೆದಾರರ ಟೆಂಡರ್‌ನ ವಿವರಗಳು ಕೆಳಕಂಡಂತಿವೆ:

| | |
|---|---|
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | **ರೂ.15,22,554/–** |

| **ಕ್ರಮ ಸಂಖ್ಯೆ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ / ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
|---|---|---|---|
| 1 | ಸಂತೋಷ ಕೆ. ಗಾಣಿಗೇರ<br>1ನೇ ದರ್ಜೆ ಗುತ್ತಿಗೆದಾರರು | ರೂ.17,31,160/– | 13.70 ಹೆಚ್ಚು |

ಮೇಲ್ಕಂಡಂತೆ ಶ್ರೀ ಸಂತೋಷ ಕೆ.ಗಾಣಿಗೇರ, 1ನೇ ದರ್ಜೆ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.13.70ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್ ರವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ: 28/08/10 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 15,22,554–00ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.17,20,486–00ಗಳಿಗೆ ಕಾಮಗಾರಿಯನ್ನು ಶ್ರೀ ಸಂತೋಷ ಕೆ.ಗಾಣಿಗೇರ 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 45 ಏನೀಯೋ 2010, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು, ನಂದೇಶ್ವರ ಗ್ರಾಮದ ಹತ್ತಿರ ಗಂಗಾಕಲ್ಯಾಣ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 15,22,554–00ಗಳ ಮೇಲೆ ಶೇಕಡ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.17,20,486–00ಗಳಿಗೆ (ಹದಿನೇಳು ಲಕ್ಷದ ಇಪ್ಪತ್ತು ಸಾವಿರದ ನಾನೂರ ಎಂಭತ್ತಾರು ರೂ.ಗಳು ಮಾತ್ರ) ಶ್ರೀ ಸಂತೋಷ ಕೆ.ಗಾಣಿಗೇರ 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿ ಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2610 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ಕಾರ್ಯಚಟುವಟಿಕೆ, ಆಡಳಿತ ನಿರ್ವಹಣೆಗಾಗಿ ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ವಿಯುಇ 50 ವಿತ್ರಮ 2010, ದಿನಾಂಕ: 13.04.2010.

2) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಇವರ ಪತ್ರ ಸಂ. KSNDMC/Budget/ACT/140/2010-11. ದಿನಾಂಕ: 11.10.2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ. ಸಂ. (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2010–11ನೇ ಸಾಲಿನಲ್ಲಿ ಮುಂದುವರಿಸಿ, 2010–11ನೇ ಸಾಲಿನ ಲೆಕ್ಕಶೀರ್ಷಿಕೆ 3455–00–200–0–01(059)(ಯೋ) ಇದರಡಿಯಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರಕ್ಕೆ ಸಹಾಯಾನುದಾನವಾಗಿ ಒಟ್ಟು ರೂ.300.00 ಲಕ್ಷಗಳ ಅನುದಾನವನ್ನು ಆಯವ್ಯಯದಲ್ಲಿ ಕಲ್ಪಿಸಲಾಗಿದೆ. ಇದರ ಪೈಕಿ ಮೊದಲನೇ ಹಾಗೂ ಎರಡನೇ ಕಂತಾಗಿ ರೂ.150.00 ಲಕ್ಷಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರ.ಸಂ.(2) ರಲ್ಲಿನ ಪತ್ರದಲ್ಲಿ ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು 2010–11ನೇ ಸಾಲಿನಲ್ಲಿ ಕೇಂದ್ರದ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಯ ಸಲುವಾಗಿ ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಿಯುಇ 1 ಬಉಕೋ 2010, ಬೆಂಗಳೂರು, ದಿನಾಂಕ : 14.10.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2010–11ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರವು ಹಮ್ಮಿಕೊಂಡಿರುವ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಮೂರನೇ ಕಂತಿನ ಅನುದಾನವಾಗಿ ಲೆಕ್ಕ ಶೀರ್ಷಿಕೆ 3455–00–200–0–01(059) (ಯೋ) ಇದರಡಿಯಲ್ಲಿ ರೂ.50.00 ಲಕ್ಷಗಳನ್ನು (ರೂ. ಐವತ್ತು ಲಕ್ಷಗಳು ಮಾತ್ರ) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮಂಜೂರು ಮಾಡಿದೆ.

1) ಈ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3455–00–200–0–01(059) (ಯೋ) ಇದರಡಿಯಲ್ಲಿ ಭರಿಸತಕ್ಕದ್ದು,

2) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು ಸ್ವೀಕೃತ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.

3) ಈಗ ಬಿಡುಗಡೆ ಮಾಡಿದ ಹಣವನ್ನು ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು ಮತ್ತು ಸಂಪೂರ್ಣವಾಗಿ ಉಪಯೋಗ ಮಾಡಿದ ಬಗ್ಗೆ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕ ಪತ್ರಗಳನ್ನು ದೃಢೀಕರಣದೊಂದಿಗೆ ದಿನಾಂಕ: 30/05/2011ರ ಒಳಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4) ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದೆ ವರ್ಗಾಯಿಸಬಾರದು.

5) ಅನುದಾನವನ್ನು ಬಳಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು ಇಲ್ಲವಾದಲ್ಲಿ ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಸಂಸ್ಥೆಗೆ ಆದಾಯವೆಂದು ಪರಿಗಣಿಸಿ, ಮುಂದೆ ಅನುದಾನ ಬಿಡುಗಡೆ ಸಂದರ್ಭದಲ್ಲಿ ಸದರಿ ಮೊತ್ತವನ್ನು ಕಡಿತಗೊಳಿಸಲಾಗುವುದು.

6) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16/05/2008ರನ್ವಯ ಇಲಾಖಾ ಪ್ರಧಾನ ಕಾರ್ಯದರ್ಶಿರವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 2611

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ರಾಜ್ಯದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಸುಧಾರಣೆಗೆ ಕೆ-ಫಿಸ್ಟ್ (K-FIST) ನಿಧಿಯನ್ನು ಸ್ಥಾಪಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ವಿಯಇ 51 ವಿತ್ರಮ 2008, ದಿ:11/9/2008 ಮತ್ತು 14/10/2008.
2) ಪ್ರೊ.ಸಿ.ಎನ್.ಆರ್.ರಾವ್ ರವರ ಅಧ್ಯಕ್ಷತೆಯಲ್ಲಿ ದಿನಾಂಕ: 21/04/2010 ರಂದು ಜರುಗಿದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 5ನೇ ಸಭೆಯ ನಿರ್ಣಯ.
3) ಸರ್ಕಾರಿ ಆದೇಶ ಸಂಖ್ಯೆ: ವಿಯಇ 55 ವಿತ್ರಮ 2010, ದಿನಾಂಕ: 03-08-2010
4) ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಟಿಪ್ಪಣಿ ಸಂಖ್ಯೆ: VGST/P-15/K-FIST/2010-11/379, ದಿ: 23-09-2010.

**ಪ್ರಸ್ತಾವನೆ :**

ಪ್ರೊ.ಸಿ.ಎನ್.ಆರ್.ರಾವ್‌ರವರ ಅಧ್ಯಕ್ಷತೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ(1)ರಲ್ಲಿನ ಆದೇಶದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹವನ್ನು ರಚಿಸಲಾಗಿರುತ್ತದೆ. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರನ್ವಯ ದಿನಾಂಕ: 21-4-2010 ರಂದು ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 5ನೇ ಸಭೆಯಲ್ಲಿ ಕೆ-ಫಿಸ್ಟ್ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಸಲುವಾಗಿ ಕಾರ್ಯತಂತ್ರಗಳ ಬಗ್ಗೆ ಸಮಗ್ರವಾಗಿ ಚರ್ಚಿಸಿ ಅನುಷ್ಠಾನ ಪ್ರಕ್ರಿಯೆಗಳ ಕಾರ್ಯ ಯೋಜನೆಯನ್ನು ರೂಪಿಸಲಾಗಿದೆ. ರಾಜ್ಯದ ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ ಬರುವ ಅರ್ಹ ಉನ್ನತ ಶಿಕ್ಷಣ ಸಂಸ್ಥೆಗಳು ಸ್ನಾತಕೋತ್ತರ ಹಂತದಲ್ಲಿ ವಿಜ್ಞಾನ ಬೋಧನೆ ಮತ್ತು ಸಂಶೋಧನೆಗಾಗಿ ಅಗತ್ಯ ಮೂಲ ಸೌಕರ್ಯಗಳನ್ನು ಪಡೆಯುವಲ್ಲಿ ಹಣಕಾಸಿನ ನೆರವನ್ನು ನೀಡುವುದು ಯೋಜನೆಯ ಮುಖ್ಯ ಉದ್ದೇಶವಾಗಿದೆ. ಈ ಯೋಜನೆಯಡಿಯಲ್ಲಿ ಮೂಲ ಸೌಕರ್ಯಗಳನ್ನು ಪಡೆಯಲು ಎರಡು ವರ್ಗಗಳಲ್ಲಿ ಶಿಕ್ಷಣ ಸಂಸ್ಥೆಗಳಿಗೆ ರೂ.500.00 ಲಕ್ಷಗಳ ಸಹಾಯಾನುದಾನವನ್ನು ನೀಡಲು ತೀರ್ಮಾನಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಆದೇಶದಲ್ಲಿ 2010-11ನೇ ಸಾಲಿನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಹೊಸ ಯೋಜನೆಯಾದ ರಾಜ್ಯದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಶಿಕ್ಷಣ ಮತ್ತು ಸಂಶೋಧನೆಯ ಮೂಲ ಸೌಕರ್ಯಗಳನ್ನು ಅಭಿವೃದ್ಧಿಗೊಳಿಸಲು ಕೆ-ಫಿಸ್ಟ್ Karnataka Fund for Improvement of Science & Technology Infrastructure in Higher Educational Institutions (K-FIST) ನಿಧಿಯನ್ನು ರೂ.500.00 ಲಕ್ಷಗಳ ವೆಚ್ಚದಲ್ಲಿ ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(4)ರಲ್ಲಿನ ಪತ್ರದಲ್ಲಿ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರು 2010-11ನೇ ಸಾಲಿನಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಹೊಸ ಯೋಜನೆಯಾದ ರಾಜ್ಯದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಸುಧಾರಣೆಗೆ ಕೆ-ಫಿಸ್ಟ್ (K-FIST) ನಿಧಿಯನ್ನು ಸ್ಥಾಪಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲು ರೂ.500.00 ಲಕ್ಷಗಳ ಸಹಾಯಾನುದಾನ ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(5)ರಲ್ಲಿನ ಆರ್ಥಿಕ ಇಲಾಖೆಯ ಟಿಪ್ಪಣಿಯಲ್ಲಿ ಕೆ-ಫಿಸ್ಟ್ ಯೋಜನೆಯ ಅನುಷ್ಠಾನಕ್ಕಾಗಿ ಪ್ರಸಕ್ತ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 3425-60-600-0-03-ಕೆ-ಫಿಸ್ಟ್-059-ಇತರೇ ಖರ್ಚು (ಯೋಜನೆ) ಇದರಡಿ ಒದಗಿಸಿರುವ ರೂ.500.00 ಲಕ್ಷಗಳ ಅನುದಾನದಲ್ಲಿ ಮೊದಲನೇ ಕಂತಿನ ಮೊತ್ತವಾಗಿ ರೂ.250.00 ಲಕ್ಷವನ್ನು ಬಿಡುಗಡೆ ಮಾಡಲು ನೀಡಲಾದ ಒಪ್ಪಿಗೆಯಂತೆ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹಕ್ಕೆ ಅನುದಾನ ಬಿಡುಗಡೆ ಮಾಡುವ ಪ್ರಸ್ತಾವನೆಯನ್ನು ಪರಿಶೀಲಿಸದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಐಯಇ 35 ವಿತ್ರಮ 2010, ಬೆಂಗಳೂರು, ದಿನಾಂಕ : 12–10–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ವತಿಯಿಂದ ಕರ್ನಾಟಕ ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಗುಣಮಟ್ಟದ ಉನ್ನತ ಶಿಕ್ಷಣ ಮತ್ತು ಸಂಶೋಧನೆ ಕೈಗೊಳ್ಳಲು ಅನುವಾಗುವಂತೆ ರಾಜ್ಯದ ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ ಬರುವ ಅರ್ಹ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಸ್ನಾತಕೋತ್ತರ ಹಂತದಲ್ಲಿ ವಿಜ್ಞಾನ ಬೋಧನೆ ಮತ್ತು ಸಂಶೋಧನೆಗಾಗಿ ಅಗತ್ಯ ಮೂಲ ಸೌಕರ್ಯಗಳ ಉನ್ನತೀಕರಣಕ್ಕಾಗಿ ಆರ್ಥಿಕ ನೆರವನ್ನು ನೀಡುವ ಸಲುವಾಗಿ ಕೆ–ಫಿಸ್ಟ್ Karnataka Fund for Improvement of Science & Technology Infrastructure in Higher Educational Institutions (K-FIST) ನಿಧಿಯನ್ನು ಸ್ಥಾಪಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲು ರೂ.250.00 ಲಕ್ಷಗಳ (ರೂ. ಎರಡು ಕೋಟಿ ಐವತ್ತು ಲಕ್ಷಗಳು ಮಾತ್ರ) ಸಹಾಯಾನುದಾನವನ್ನು ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ, ಬೆಂಗಳೂರು. ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1) ಈ ಅನುದಾನವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ 3425–60–600–0–03–ಕೆ ಫಿಸ್ಟ್–059– ಇತರೇ ಖರ್ಚು (ಯೋಜನೆ) ಇದರಡಿ ಸಹಾಯಾನುದಾನ ಭರಿಸತಕ್ಕದ್ದು.
2) ವೈಜ್ಞಾನಿಕ ಅಧಿಕಾರಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಬೆಂಗಳೂರು. ಇವರು ಸ್ವೀಕೃತ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.
3) ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಮತ್ತು ಕಾರ್ಯಗತಗೊಳಿಸುವ ಚಟುವಟಿಕೆಯ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4) ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನಕ್ಕೆ ಲೆಕ್ಕ ಪರಿಶೋಧಕರಿಂದ ಪರೀಕ್ಷಿಸಲ್ಪಟ್ಟ ಲೆಕ್ಕ ಪತ್ರಗಳ ಉಪಯೋಗತಾ ಪ್ರಮಾಣ ಪತ್ರಗಳನ್ನು ಯೋಜನೆ ಅನುಷ್ಠಾನದ ತಕ್ಷಣ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5) ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಉಳಿಸಿಕೊಂಡಲ್ಲಿ, ಅದನ್ನು ಸರ್ಕಾರದ ಗಮನಕ್ಕೆ ತರದಿದ್ದಲ್ಲಿ ಸದರಿ ಮೊತ್ತಕ್ಕೆ ಬ್ಯಾಂಕುಗಳು ನೀಡುವ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸತಕ್ಕದ್ದು,
6) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನವನ್ನು ಬಳಸದೆ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು, ಮತ್ತು ಅಂತ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಸಂಸ್ಥೆಗೆ ಆದಾಯವೆಂದು ಪರಿಗಣಿಸಿ, ಸಂಸ್ಥೆಗೆ ಮುಂದೆ ಅನುದಾನ ಬಿಡುಗಡೆಯ ಸಂದರ್ಭದಲ್ಲಿ ಸದರಿ ಮೊತ್ತವನ್ನು ಕಡಿತಗೊಳಿಸಲಾಗುವುದು.
7) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದಲ್ಲಿ ತಪ್ಪದೇ ಒದಗಿಸತಕ್ಕದ್ದು,

**ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 354 ವೆಚ್ಚ–2/10, ದಿನಾಂಕ: 05.10.2010 ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 2612

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ಮಾಸ್ಟರ್ ಕಂಟ್ರೋಲ್ ಫೆಸಿಲಿಟಿ (Master Control Centre) ಸ್ಥಾಪನೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಐಯಇ 50 ವಿತ್ರಮ 2010, ದಿನಾಂಕ: 13.04.2010.
2) ಸರ್ಕಾರಿ ಆದೇಶ ಸಂಖ್ಯೆ: ಐಯಇ 10 ಬಉಕೋ 2009, ದಿನಾಂಕ: 04.06.2010.
3) ನಿರ್ದೇಶಕರು, ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರ ಪತ್ರ ಸಂಖ್ಯೆ: KSNDMC/MCC/176/2010-11/142, ದಿ: 26.12.2009.
4) ಆರ್ಥಿಕ ಇಲಾಖೆ (ವೆಚ್ಚ 2–10)ರ ಟಿಪ್ಪಣಿ ಸಂಖ್ಯೆ: FD 327 Exp-2/2010, ದಿನಾಂಕ: 14.09.2010 ಮತ್ತು FD 358 Exp-2/2010, ದಿ: 27.09.2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2010–11ನೇ ಸಾಲಿನಲ್ಲಿ ಮುಂದುವರೆಸಿ, 2010–11ನೇ ಸಾಲಿನ ಲೆಕ್ಕಶೀರ್ಷಿಕೆ 3455–00–200–0–01(059) (ಯೋಜನೆ) ಇದರಡಿಯಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರಕ್ಕೆ ಒಟ್ಟು ರೂ.300.00 ಲಕ್ಷಗಳ ಸಹಾಯಾನುದಾನವನ್ನು ಆಯವ್ಯಯದಲ್ಲಿ ಕಲ್ಪಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರಲ್ಲಿನ ಸರ್ಕಾರಿ ಆದೇಶದಲ್ಲಿ 2010ನೇ ಸಾಲಿನ ದಿನಾಂಕ: 24–05–2010ರಂದು ನಡೆದ ಸಚಿವ ಸಂಪುಟದ 7ನೇ ಸಭೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅಂಗ ಸಂಸ್ಥೆಯಾದ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪಗಳ ಉಸ್ತುವಾರಿ ಕೇಂದ್ರದ ವತಿಯಿಂದ ರೂ.872.50 ಲಕ್ಷಗಳಲ್ಲಿ ಕರ್ನಾಟಕ ನೈಸರ್ಗಿಕ ವಿಕೋಪಗಳ ಉಸ್ತುವಾರಿ ಕೇಂದ್ರದ (Master Control Facility) ಸ್ಥಾಪನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(3)ರಲ್ಲಿನ ಪತ್ರದಲ್ಲಿ ನಿರ್ದೇಶಕರು, ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು ಮಾಸ್ಟರ್ ಕಂಟ್ರೋಲ್ ಫೆಸಿಲಿಟಿ (Master Control Centre) ಸ್ಥಾಪನೆಗೆ ಕಟ್ಟಡ ನಿರ್ಮಾಣ, ಯಂತ್ರೋಪಕರಣ ಮುಂತಾದವುಗಳಿಗೆ ಅಂದಾಜು ರೂ.872.50 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರವು ತನ್ನ ಸಾಂಸ್ಥಿಕ ನಿಧಿಯಲ್ಲಿ ಲಭ್ಯವಿರುವ ರೂ.2.00 ಕೋಟಿಗಳ ಹಣವನ್ನು ಬಳಸಿಕೊಂಡು ರೂ.872.50 ಲಕ್ಷಗಳಲ್ಲಿ ಸ್ಥಾಪಿಸಲಾಗುವುದು. ಆದ್ದರಿಂದ ಮೊದಲನೇ ಹಂತದ 1ನೇ ಮತ್ತು 2ನೇ ತ್ರೈಮಾಸಿಕ ಅವಧಿಗೆ ಬೇಕಾದ ರೂ.402.25 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(4)ರಲ್ಲಿನ ಆರ್ಥಿಕ ಇಲಾಖೆಯ ಟಿಪ್ಪಣಿಗಳಲ್ಲಿ ನೀಡಲಾದ ಸಹಮತಿಯನ್ವಯ ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರಕ್ಕೆ ಅನುದಾನ ಬಿಡುಗಡೆ ಮಾಡುವ ಪ್ರಸ್ತಾವನೆಯನ್ನು ಪರಿಶೀಲಿಸದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಿಯಇ 10 ಬಉಕೋ 2009, ಬೆಂಗಳೂರು, ದಿನಾಂಕ: 05–10–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅಂಗ ಸಂಸ್ಥೆಯಾದ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪಗಳ ಉಸ್ತುವಾರಿ ಕೇಂದ್ರ, ಬೆಂಗಳೂರು. ಈ ಸಂಸ್ಥೆ ವತಿಯಿಂದ ಮಾಸ್ಟರ್ ಕಂಟ್ರೋಲ್ ಫೆಸಿಲಿಟಿ (Master Control Centre) ಕಟ್ಟಡ ನಿರ್ಮಾಣ, ಯಂತ್ರೋಪಕರಣ ಮುಂತಾದವುಗಳ ಸ್ಥಾಪನೆಗೆ ರೂ.100.00 ಲಕ್ಷಗಳನ್ನು (ರೂಪಾಯಿ ನೂರು ಲಕ್ಷಗಳು ಮಾತ್ರ) ನಿರ್ದೇಶಕರು, ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರಿಗೆ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

1) **ಈ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3455–00–200–01(059) (ಯೋ) ಇದರಡಿಯಲ್ಲಿ ಭರಿಸತಕ್ಕದು,**
2) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು ಸ್ವೀಕೃತ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.
3) 2010–11ನೇ ಸಾಲಿನಲ್ಲಿ ಬಿಡುಗಡೆ ಮಾಡಲಾದ ಹಣವನ್ನು ಪೂರ್ಣವಾಗಿ ಸದುಪಯೋಗಪಡಿಸಿಕೊಂಡು ಉಪಯೋಗತಾ ಪ್ರಮಾಣ ಪತ್ರವನ್ನು ಹಾಗೂ ಲೆಕ್ಕ ಪರಿಶೋಧಕರಿಂದ ದೃಢೀಕರಿಸಲ್ಪಟ್ಟ ತನಿಖಾ ವರದಿಗಳನ್ನು ಕಟ್ಟಡ ಸ್ಥಾಪನೆಯಾದ ನಂತರ ಸರ್ಕಾರಕ್ಕೆ ಸಲ್ಲಿಸತಕ್ಕದ್ದು;
4) ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದೆ ವರ್ಗಾಯಿಸಬಾರದು;
5) ಉದ್ದೇಶಿತ ಕಾರ್ಯಯೋಜನೆಗೆ ಬಿಡುಗಡೆ ಮಾಡಲಾದಂತಹ ಅನುದಾನವನ್ನು ವಿನಿಯೋಗಿಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು, ಇಲ್ಲದೆ ಹೋದಲ್ಲಿ ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಸಂಸ್ಥೆಗೆ ಆದಾಯವೆಂದು ಪರಿಗಣಿಸಿ ಮುಂದೆ ಅನುದಾನ ಬಿಡುಗಡೆಯ ಸಂದರ್ಭದಲ್ಲಿ ಸದರಿ ಮೊತ್ತವನ್ನು ಕಡಿತಗೊಳಿಸಲಾಗುವುದು;
7) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದಲ್ಲಿ ತಪ್ಪದೇ ಒದಗಿಸತಕ್ಕದ್ದು.

**ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿಗಳ ಸಂಖ್ಯೆ: FD 327 Exp-2/2010, ದಿನಾಂಕ: 14.09.2010 ಮತ್ತು FD 358 Exp-2/2010, ದಿ: 27.09.2010ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

ಪಿ.ಆರ್. 2613

## ENERGY SECRETARIAT

**Sub :** Change of company's name from M/s Godavari Sugar Mills Limited to M/s Godavari Biorefineries Limited-reg.

**Read :**
1. Government Order No: EN 25 NCE 2009 dated: 13.07.2009.
2. Letter No: KRED/04/GSMT/2010/1213 dated: 04/05.05.2010 received from the Managing Director, Karnataka Renewable Energy Development Limited, Bangalore.
3. Government Order No: EN 25 NCE 2009 dated: 09.07.2010.
4. Letter No: KRED/04/GBL/10/2533 dated: 02.09.2010 received from the Managing Director, Karnataka Renewable Energy Development Limited, Bangalore.

**PREAMBLE :**

In the Government Order read at (1) above, "No Objection" have been issued for setting up of 2x20 MW Co-generation plant at Sameerawadi village. Mudhol Taluk, Bagalkot District to M/s Godavari Sugar Mills Limited.

In the Order of the Hon'ble High Court of Bombay dated: 20.03.2009 (Company Petition No. 25/2009 connected with company application No: 1519/2008) approval has been given to self-demerger scheme of M/s Godavari Sugar Mills Limited with M/s Gidavari Biorefineries Limited.

In view of the High Court Order in the letter read at (2) above, the Managing Director, Karnataka Renewable Energy Development Limited, Bangalore has sent a proposal to Government for change of company's name from M/s Godavari Sugar Mills Limited to M/s Godavari Biorefineries Limited.

In the Government Order read at (3) above, approval has been accorded for the change of company's name from M/s Godavari Sugar Mills Limited to M/s Godavari Biorefineries Limited.

In the letter read at (4) above, the Managing Director, KREDL has requested to issue an amendment / corrigendum to the Government Order read at (3) above, since the capacity is not mentioned in the Order portion.

The proposal has been examined in detail and issued the following Order :-

**Government Order No : EN 389 NCE 2010, Bangalore, Dated : 13.10.2010.**

Government accords approval for the change of company's name from M/s Godavari Sugar Mills Limited to M/s Godavari Biorefineries Limited for implementing the enhanced 2x20 MW 2nd Phase cogeneration plant at Sameerawadi, Mudhol Taluk, Bagalkot District.

The earlier Government Order No: EN 25 NCE 2009 dated: 09.07.2010 is withdrawn with immediate effect.

The other terms and conditions of the Government Order No: EN 25 NCE 2009 dated: 13.07.2009 shall **IPSO FACTO** applicable.

By Order and in the name of the Governor of Karnataka,
**SURESH. B. KRISHNAPPANAVAR**
Under Secretary to Government
Energy Department.

P.R. 2614

## ENERGY SECRETARIAT

**Sub :** Change of company's name from M/s Maheshwara Sugars Limited to M/s Bannari Amman Sugars Limited and change of location of the co-generation plant from Chilakawadi and Tagarpur villages to Modhalli village-reg.

**Read :**
1. Government Order No: EN 207 NCE 2007 dated: 05.10.2007.
2. Letters No: KRED/04/BAS/09/2071 dated: 1/2.07.2009, No: KRED/04/BAS/10/170 dated: 16/18.01.2010 and No: KRED/04/MSL/10/2707 dated: 08/24.09.2010 received from the Managing Director, Karnataka Renewable Energy Development Limited, Bangalore.

**PREAMBLE :**

In the Government Order read at (1) above, "No Objection" have been issued for setting up of 28.80 MW (gross) [20.1 MW exportable during season] and 26.6 MW [exportable during offseason] Co-generation plant at Chilakawadi and Tagarpur villages of Kollegal Taluk, Chamrajnagar District to M/s Maheshwara Sugars Limited.

In the letters read at (4) above, the Managing Director, KREDL has sent proposal to Government for Change of Company's name from M/s Maheshwara Sugars Limited to M/s Bannari Amman Sugars Limited and change of location of the co-generation plant from Chilakawadi and Tagarpur villages to Modhalli village.

The proposal has been examined in detail and issued the following Order :-

**Government Order No : EN 217 NCE 2008, Bangalore, Dated : 12.10.2010.**

Government accords approval for the change of company's name from M/s Maheshwara Sugars Limited to M/s Bannari Amman Sugars Limited and change of location of the co-generation plant from Chilakawadi and Tagarpur villages to Modhalli village, Kollegal Taluk, Chamarajanagar District to implement the Cogeneration power plant 28.80 MW (gross) [20.1 MW exportable during season] and 26.6 MW [exportable during offseason].

The Government has reserved the right to Cancel / modify this Order.

The other terms and conditions of the Government Order No: EN 207 NCE 2007 dated: 05.10.2007 shall **IPSO FACTO** applicable.

By Order and in the name of the Governor of Karnataka,
**SURESH. B. KRISHNAPPANAVAR**
Under Secretary to Government
Energy Department.

P.R. 2615

## ENERGY SECRETARIAT

**Sub :** Enhancement of wind power capacity from 61.05 MW to 66.6 MW in favour of M/s Bellary Wind Power Pvt. Ltd.-reg.

**Read :**
1. Government Order No: EN 243 NCE 2002 dated: 05.03.2003.
2. Government Order No: EN 169 NCE 2008 dated: 24.12.2008.
3. Letter No: KRED/08/BWPPL-Vol-II/2010/2626 dated: 31.08.2010/17.09.2010 received from the Managing Director, Karnataka Renewable Energy Development Limited, Bangalore.

**PREAMBLE :**

In the Government Order read at (1) above, permission has been accorded for implementation of 56.50 MW capacity Wind Power Project at Bellary and Davangere Districts to M/s Bellary Wind Power Pvt. Ltd. The part capacity of 15 MW wind power project at Benakanahalli, Nelagahalli, Yalavadahalli villages of Davangere District.

In the Government Order read at (2) above, sanction has been accorded for enhancement of wind power capacity from 15.00 MW to 61.05 MW at Benakanahalli, Nelagahalli, Yalavadahalli villages of Davangere District in favour a of M/s Bellary Wind Power Pvt. Ltd.

The Managing Director, Karnataka Renewable Energy Development Limited, Bangalore vide his letter read at (3) above has recommended to Government to enhance the wind power capacity from 61.05 MW to 66.6 MW at Benakanahalli, Nelagahalli, Yalavadahalli villages of Davangere District in favour of M/s Bellary wind Power Pvt. Ltd.

The proposal has been examined in detail and issued following Orders: -

**Government Order No : EN 397 NCE 2010, Bangalore, Dated : 08.10.2010.**

Government accords approval for enhancement of wind power capacity from 61.05 MW to 66.6 MW at Benakanahalli, Nelagahalli, Yalavadahalli villages of Davangere District in favour of M/s Bellary Wind Power Pvt. Ltd. as detailed below : -

| Geographical Area Details | Sanctioned Capacity | Enhancement proposed in Stage-I | Enhancement proposed in Stage-II | No. of WTG's & rating in kW | Total Capacity including proposed enhancement in MW |
|---|---|---|---|---|---|
| North West-South East oriented ridge with peaks 818, 781, 793, 792, 735, 808, 75 and 703 M elevations located around Benakanahalli, Nelagahalli and Yelavadahalli villages covered in :- **Latitude:** $14^0 7'$- $14^0 15''$ N **Longitude:** $75^0 45'$-$75^0 52'$ E Toposheet No: 48N/16 | 15 MW | 46.05 MW | 5.55 MW | 37x1800 kW | 66.60 MW |

The Government has reserved the right to Cancel / modify this Order.

The other terms and conditions of the allotment Order read at (1) above shall continue as it is.

By Order and in the name of the Governor of Karnataka,
**SURESH. B. KRISHNAPPANAVAR**
Under Secretary to Government
Energy Department.

P.R. 2616

## ಇಂಧನ ಸಚಿವಾಲಯ

**ವಿಷಯ :** M/s Kare Power Resources Private Limited ಇವರಿಗೆ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ ಇಡಿ/06/ತಂಗರಬಾಲ್ ಕಿಜವಿ/2010/2219 ದಿನಾಂಕ: 22/24.07.2010.
2. ದಿನಾಂಕ: 06.08.2010 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
3. M/s Kare Power Resources Private Limited ಇವರ ಪತ್ರ ಸಂಖ್ಯೆ: ಕೆಆರ್ ಪಿಸಿಎಲ್/2010 ದಿನಾಂಕ: 17.09.2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Kare Power Resources Private Limited ಇವರಿಗೆ ಗುಲ್ಬರ್ಗಾ (ಈಗಿನ ಯಾದಗಿರಿ ಜಿಲ್ಲೆ) ಜಿಲ್ಲೆಯ ಸುರಪುರ ತಾಲ್ಲೂಕಿನ ತಂಗರಬಾಲ್ ಗ್ರಾಮದ ಬಳಿ ಕೃಷ್ಣಾ ನದಿಗೆ ಅಡ್ಡಲಾಗಿ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Kare Power Resources Private Limited ಇವರಿಗೆ 24.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಸಮಿತಿಯು ಈ ಕೆಳಗಿನ ಅಭಿಪ್ರಾಯ ಹಾಗೂ ನಿಬಂಧನೆಯೊಂದಿಗೆ ಪರಿಗಣಿಸಿರುತ್ತದೆ.

> The FRL of the weir of the proposed mini hydel scheme of M/s Kare Power Resources Private Limited overlaps with TWL of M/s Bhoruka Power Corporation Limited, Chayadevi MHS commissioned project. If the developer agrees to reduce FRL to 424m with the TWL at 404m the available head will be more than 18m which is as per the PFR.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಅಭಿವೃದ್ಧಿದಾರರು ಹಂಚಿಕೆ ಸಮಿತಿಯ ನಿಬಂಧನೆಗೆ ಒಪ್ಪಿರುವುದಾಗಿ ತಿಳಿಸಿ, ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 312 ಎನ್‌ಸಿಇ 2010, ಬೆಂಗಳೂರು, ದಿನಾಂಕ : 22.09.2010.**

M/s Kare Power Resources Private Limited ಇವರಿಗೆ ಗುಲ್ಬರ್ಗಾ (ಈಗಿನ ಯಾದಗಿರಿ ಜಿಲ್ಲೆ) ಜಿಲ್ಲೆಯ ಸುರಪುರ ತಾಲ್ಲೂಕಿನ ತಂಗರಬಾಲ್ ಗ್ರಾಮದ ಬಳಿ ಕೃಷ್ಣಾ ನದಿಗೆ ಅಡ್ಡಲಾಗಿ 24.75 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir **Latitude:** $16^0$15'6.5" **Longitude:** $76^0$25'00" Power House-**Latitude:** $16^0$16'00" **Longitude:** $76^0$26'18") weir ನ ಪೂರ್ಣಮಟ್ಟ 424ಮೀ. ಹಾಗೂ ಟೇಲ್ ವಾಟರ್ ಲೆವಲ್‌ನ ಮಟ್ಟ 404ಮೀ. (the weir FRL to 424m with the TWL at 404m) ಸೀಮಿತಗೊಳಿಸಿ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

13. The FRL of the weir of this project should be 424m with the TWL at 404m. At any reason this project should not overlap with the already commissioned project of Chayadevi MHS of M/s Bhoruka Power Corporation Limited.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್. 2617

## ಇಂಧನ ಸಚಿವಾಲಯ

**ವಿಷಯ :** ಶ್ರೀ ಹೆಚ್.ಜಿ. ಶಿವಾನಂದ ಮೂರ್ತಿ ಐ.ಎಫ್.ಎಸ್., ಹಿಂದಿನ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರನ್ನು ದಿನಾಂಕ: 2.2.2010 ರಿಂದ 12.2.2010 ರವರೆಗೆ ಜಪಾನ್ ದೇಶದಲ್ಲಿ ನಡೆದಿರುವ 'Energy Conservation for India (ECIN 8)' ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸಿರುವುದಕ್ಕೆ ಘಟನೋತ್ತರ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ** : 1) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೆ ಆರ್ ಇಡಿ/09/ಇಸಿಎ/40/2009/4098 ದಿನಾಂಕ: 11.12.2009.

2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೆಆರ್ ಇಡಿ/01ಆಡಳಿತ/ಸಿಆರ್/2010/1134 ದಿನಾಂಕ: 22/27.04.2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು The Energy Conservation for Centre (ECCJ), Japan in collaboration with Bureau of Energy Efficiency (BEE), Government of India, Ministry of Power, New Delhi ನವರು ದಿನಾಂಕ: 2.2.2010 ರಿಂದ 12.2.2010 ರವರೆಗೆ ಯಕೋಹಾಮಾ, ಜಪಾನ್‌ನಲ್ಲಿ 'Energy Conservation for India (ECIN 8)' ತರಬೇತಿಯನ್ನು ಆಯೋಜಿಸಿದ್ದು, ಈ ತರಬೇತಿಗೆ ಜಪಾನ್ ಸರ್ಕಾರವೇ ಸಂಪೂರ್ಣ ವೆಚ್ಚವನ್ನು ಭರಿಸುತ್ತಿದ್ದು, ಕೇಂದ್ರ ಸರ್ಕಾರವಾಗಲಿ, ರಾಜ್ಯ ಸರ್ಕಾರವಾಗಲಿ ಯಾವುದೇ ವೆಚ್ಚವನ್ನು ಭರಿಸಬೇಕಾಗಿರುವುದಿಲ್ಲವೆಂದು ತಿಳಿಸುತ್ತ, ಈ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸಲು ಅನುಮತಿಯನ್ನು ನೀಡುವಂತೆ ಕೋರಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಪತ್ರದೊಂದಿಗೆ ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ರವರು ಸದರಿಯವರು ತರಬೇತಿಯಲ್ಲಿ ಭಾಗವಹಿಸಿರುವುದಕ್ಕೆ ಅನುಮೋದನೆ ನೀಡಿರುವ ಕ್ರೆಡಲ್ ನ 57ನೇ ನಿರ್ದೇಶಕರ ಮಂಡಳಿಯ ಸಭೆಯ ದಿನಾಂಕ: 5.04.2010ರ ಠರಾವಿನ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುತ್ತಾ, ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸಿರುವುದಕ್ಕೆ ಅನುಮತಿ ಕೋರಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 628 ಎನ್‌ಸಿಇ 2009, ಬೆಂಗಳೂರು, ದಿನಾಂಕ : 06.10.2010.**

ಶ್ರೀ ಹೆಚ್.ಜಿ. ಶಿವಾನಂದ ಮೂರ್ತಿ ಐ.ಎಫ್.ಎಸ್., ಹಿಂದಿನ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ದಿನಾಂಕ: 2.2.2010 ರಿಂದ 12.2.2010 ರವರೆಗೆ ಯಕೋಹಾಮಾ, ಜಪಾನ್ ದೇಶದಲ್ಲಿ ನಡೆದ 'Energy Conservation for India (ECIN 8)' ತರಬೇತಿಯಲ್ಲಿ ಭಾಗವಹಿಸಿರುವುದಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆಯನ್ನು ನೀಡಲಾಗಿದೆ.

ಸದರಿ ಅಧಿಕಾರಿಯವರ ಮೇಲ್ಕಂಡ ವಿದೇಶ ಪ್ರವಾಸಕ್ಕೆ ತಗಲಿದ ವೆಚ್ಚವನ್ನು ಜಪಾನ್ ಸರ್ಕಾರದ ವತಿಯಿಂದಲೇ ಭರಿಸತಕ್ಕದ್ದು.

ಸದರಿ ಅಧಿಕಾರಿಯವರ ವಿದೇಶ ಪ್ರವಾಸದ ವರದಿಯನ್ನು ಕಡ್ಡಾಯವಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)ಯ ಟಿಪ್ಪಣಿ ಸಂಖ್ಯೆ: ಸಿಆಸುಇ 11 ಎಸ್‌ಎಂಇ 2010 ದಿನಾಂಕ: 8.2.2010ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್. 2618

## ಆರ್ಥಿಕ ಸಚಿವಾಲಯ

**ವಿಷಯ :** ರಾಜ್ಯ ಸರ್ಕಾರಿ ನೌಕರರ ಮನೆ ಬಾಡಿಗೆ ಭತ್ಯೆ ದರಗಳ ಪರಿಷ್ಕರಣೆ ಕುರಿತು.

**ಓದಲಾಗಿದೆ** : 1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 19 ಎಸ್‌ಆರ್‌ಪಿ 99 ದಿನಾಂಕ: 10–8–1999

2. ಸರ್ಕಾರಿ ಅದೇಶ ಸಂಖ್ಯೆ: ಎಫ್‌ಡಿ 14 ಎಸ್‌ಆರ್‌ಪಿ 2002 ದಿನಾಂಕ: 12–4–2002

3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 2007 ದಿನಾಂಕ: 16–5–2007

4. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಎಸ್‌ಆರ್‌ಪಿ 2009 ದಿನಾಂಕ: 2–3–2009

**ಪ್ರಸ್ತಾವನೆ :**

ರಾಜ್ಯ ಸರ್ಕಾರವು ರಾಜ್ಯ ಸರ್ಕಾರಿ ನೌಕರರಿಗೆ ನೀಡುತ್ತಿರುವ ಮನೆ ಬಾಡಿಗೆ ಭತ್ಯೆಯ ದರಗಳನ್ನು ಪರಿಷ್ಕರಿಸುವ ಬಗ್ಗೆ ಪರಿಶೀಲಿಸಿದ್ದು, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 29 ಎಸ್‌ಆರ್‌ಪಿ 2010, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2010**

ಸರ್ಕಾರವು ಈ ಕೆಳಗೆ ಸೂಚಿಸಿರುವ ನಗರಗಳು ಮತ್ತು ಪಟ್ಟಣಗಳಲ್ಲಿ ಕಾರ್ಯ ನಿರ್ವಹಿಸುವ ರಾಜ್ಯ ಸರ್ಕಾರಿ ನೌಕರರ ಮನೆ ಬಾಡಿಗೆ ಭತ್ಯೆ ದರಗಳನ್ನು ದಿನಾಂಕ: **1ನೇ ಜನವರಿ 2010** ರಿಂದ ಜಾರಿಗೆ ಬರುವಂತೆ ಈ ಕೆಳಗಿನಂತೆ ಪರಿಷ್ಕರಿಸಿ ಆದೇಶಿಸಲು ಹರ್ಷಿಸುತ್ತದೆ.

| ನಗರ / ಪಟ್ಟಣಗಳ ವರ್ಗೀಕರಣ | ಮನೆ ಬಾಡಿಗೆ ಭತ್ಯೆಯ ಪರಿಷ್ಕೃತ ದರಗಳು |
|---|---|
| ಎ | ಮೂಲ ವೇತನದ<br>ಶೇಕಡ 25% ರಷ್ಟು |
| ಬಿ–1 | ಮೂಲ ವೇತನದ |

| | |
|---|---|
| ಬಿ–2 | ಶೇಕಡ 16% ರಷ್ಟು |
| ಸಿ | ಮೂಲ ವೇತನದ ಶೇಕಡ 10% ರಷ್ಟು |
| ಡಿ | ಮೂಲ ವೇತನದ ಶೇಕಡ 7% ರಷ್ಟು |
| ಇ | ಮೂಲ ವೇತನದ ಶೇಕಡ 6% ರಷ್ಟು |

2. ಈ ಆದೇಶಗಳು, ಕರ್ನಾಟಕ ನಾಗರಿಕ ಸೇವಾ ನಿಯಮಗಳ ಉಪಬಂಧಗಳ ವ್ಯಾಪ್ತಿಯೊಳಗೆ ಬರುವ ಪೂರ್ಣಕಾಲಿಕ ಮತ್ತು ಕಾಲಿಕ ವೇತನ ಶ್ರೇಣಿಯಲ್ಲಿನ ಎಲ್ಲಾ ಸರ್ಕಾರಿ ನೌಕರರಿಗೂ ಅನ್ವಯವಾಗುತ್ತದೆ.
3. ಈ ನಿಯಮಗಳನ್ನು (i) ಕಾಲಿಕ ವೇತನ ಶ್ರೇಣಿಯಲ್ಲಿರುವ ವರ್ಕ್‌ಚಾರ್ಜ್ಡ್ ನೌಕರರು (ii) ಕಾಲಿಕ ವೇತನ ಶ್ರೇಣಿಯಲ್ಲಿರುವ ಅನುದಾನಿತ ಶಿಕ್ಷಣ ಸಂಸ್ಥೆಗಳ ಪೂರ್ಣಕಾಲಿಕ ನೌಕರರು ಮತ್ತು ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿ (iii) ಯುಜಿಸಿ / ಎಐಸಿಟಿಇ / ಐಸಿಎಆರ್ ವೇತನ ಶ್ರೇಣಿಯಲ್ಲಿ ವೇತನ ಪಡೆಯುವ ವಿಶ್ವವಿದ್ಯಾನಿಲಯಗಳ, ಎಂಜಿನಿಯರಿಂಗ್ ಕಾಲೇಜುಗಳ ಸಿಬ್ಬಂದಿಗೆ ಮತ್ತು (iv) ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಅನ್ವಯವಾಗುವಂತೆ ವಿಸ್ತರಿಸಲಾಗಿದೆ.
4. ಮನೆ ಬಾಡಿಗೆ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ 50 ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು 50 ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಎಸ್. ಗೋಪಾಲಕೃಷ್ಣ**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸೇವೆಗಳು–2).

## FINANCE SECRETARIAT

**Sub :** Revision of the rates of House Rent Allowance in respect of State Government Employees.

**Read :**
1. Government Order No: FD 19 SRP 99 dated: 10-8-1999
2. Government Order No: FD 14 SRP 2002 dated: 12-4-2002
3. Government Order No: FD 8 SRP 2007 dated: 16-5-2007
4. Government Order No: FD 01 SRP 2009 dated: 2-3-2009

**PREAMBLE :**

The Government has considered the question of revision of the rates of House Rent Allowance in respect of State Government employees. Accordingly the following orders are issued.

**Government Order No: FD 29 SRP 2010, Bangalore, Dated : 28th October 2010.**

Government are pleased to order that the existing rates of House Rent Allowance in respect of State Government employees working in the cities and towns indicated below shall be revised with effect from **1st January 2010** as follows:

| Classification of Cities/Towns | Revised Rates of House Rent Allowance |
|---|---|
| A | 25% of basic pay |
| B-1<br>B-2 | 16% of basic pay |
| C | 10% of basic pay |
| D | 7% of basic pay |
| E | 6% of basic pay |

These orders shall be applicable to all full time Government employees who are governed by the provisions of the Karnataka Civil Services Rules and who are on time scales of pay.

2. These orders are extended to (i) full-time employees borne on work-charged establishments of Government on time scale of pay (ii) full-time employees of the Aided educational institutions and non-teaching staff of the Universities who are on time-scale of pay (iii) employees of the Universities/Engineering Colleges who are drawing pay in the UGC/ICAR/AICTE scales of pay and to Judicial Officers on FNJPC pay scales.
3. The payment on account of House Rent Allowance involving fractions of 50 paise and above shall be rounded off to the next rupee and fractions of less than 50 paise shall be ignored.

By Order and in the name of the Governor of Karnataka,

**K.S.GOPALA KRISHNA**
Deputy Secretary to Government
Finance Department (Services-2)

P.R. 2619

## ಇಂಧನ ಸಚಿವಾಲಯ

**ವಿಷಯ** : ಮೆ॥ ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರ ಶಹಾಪುರ captive power plant ಗೆ ವಿದ್ಯುಚ್ಛಕ್ತಿ ತೆರಿಗೆ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ: ಇಂಇ 97 ಪಿಪಿಸಿ 92 ದಿನಾಂಕ: 8.06.1992.
2) ಸರ್ಕಾರದ ಆದೇಶ ಸಂಖ್ಯೆ: ಡಿಇ 84 ಪಿಪಿಸಿ 92 ದಿನಾಂಕ: 20.07.1992.
3) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಇ 21 ಸಿಇಇಬಿ 95 ದಿನಾಂಕ: 18.06.1997.
4) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಎಂವಿಪಿ/ಎಲ್ಎ–ಎಸ್ಎಲ್ ಎ(ಟ್ಯಾಕ್ಸ್) ಎಲ್ಎಸ್–2/01–02/12743 ದಿನಾಂಕ: 5.09.2001.
5) ಸರ್ಕಾರದ ಪತ್ರ ಸಂಖ್ಯೆ: ಇಂಇ 192 ಎನ್ ಸಿ ಇ 2001 ದಿನಾಂಕ: 26/27.10.2003.
6) ಘನ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ: 16.06.2010.
7) ಮೆ॥ ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರ ಪತ್ರ ಸಂಖ್ಯೆ: ಬಿಪಿಸಿಎಲ್/ಎನರ್ಜಿ–ಲೀಗಲ್/2010 ದಿನಾಂಕ: 15.07.2010.
8) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ವಿಪ(ತೆ)/ಲೆಅ/ವ್ಯ/ಸಲೆಅ3/14275/10–11 ದಿನಾಂಕ: 16.08.2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಖಾಸಗಿ ವಿದ್ಯುತ್ ಉತ್ಪಾದಕರಿಗೆ grant of concessions/incentives ಬಗ್ಗೆ ಸಂಬಂಧಿಸಿದ ಆದೇಶ ಭಾಗದ ಕ್ರಮ 9ರಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ

> "Exemption of Electricity Tax on power generated for own consumption shall be granted in the case of new industrial units for a period of 5 years in order to provide adequate incentives for utilising capacity of captive generation units set by them".

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಗುಲ್ಬರ್ಗಾ ಜಿಲ್ಲೆಯ ಶಹಾಪುರ ಬ್ರಾಂಚ್ ಕೆನಾಲ್‌ನ ಕ್ಲಸ್ಟರ್ 1 ರಿಂದ 6ರಲ್ಲಿ ಒಟ್ಟು 6.55 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ಅಧಿಸೂಚನೆಯಲ್ಲಿ ಈ ಕೆಳಗಿನಂತೆ ಅಧಿಸೂಚಿಸಲಾಗಿದೆ :–

> "In exercise of the powers conferred by Section 8 of the Karnataka Electricity (Taxation on Consumption) Act, 1959, and in supersession of the Notification No. PWD 87 EIP 85, dated : 6.4.1985 and 25.6.1985 or any other Notification on this subject, Government of Karnataka with effect from 1$^{st}$ July 1996, and until further orders exempt from payment of electricity tax under the said Act, on Captive (Self Consumption) Generation".

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಇವರು ಮೆ॥ ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರ ಶಹಾಪುರ ಕಿರು ಜಲ ವಿದ್ಯುತ್ ಯೋಜನೆ ಸ್ಥಳವನ್ನು ಪರಿವೀಕ್ಷಿಸಿ, ಈ ಯೋಜನೆಯಿಂದ ಉತ್ಪನ್ನವಾದ ವಿದ್ಯುತ್ತನ್ನು ಇತರರಿಗೆ ಮಾರಾಟ ಮಾಡಿರುವ ಬಗ್ಗೆ ವಿದ್ಯುಚ್ಛಕ್ತಿ ತೆರಿಗೆಯನ್ನು ಪಾವತಿಸಿದ್ದು, ಆದರೆ, ಮೆ॥ ಬೊರುಕಾ ಇಂಜಿನಿಯರಿಂಗ್ ಇಂಡಸ್ಟ್ರೀಸ್ ಲಿಮಿಟೆಡ್, ಮಹದೇವಪುರ, ಬೆಂಗಳೂರು, ಮೆ॥ ಬೊರುಕಾ ಗ್ಯಾಸಸ್ ಲಿಮಿಟೆಡ್, ಮಹದೇವಪುರ, ಬೆಂಗಳೂರು ಮತ್ತು ಮೆ॥ ಬೊರುಕಾ ಟೆಕ್ಸ್‌ಟೈಲ್ಸ್ ಲಿಮಿಟೆಡ್, ಹುಬ್ಬಳ್ಳಿ ಈ ಸಂಸ್ಥೆಗಳಿಗೆ ವಿದ್ಯುತ್ ಪೂರೈಸಿದ್ದು, ಆದರೆ ವಿದ್ಯುಚ್ಛಕ್ತಿ ತೆರಿಗೆಯನ್ನು ಪಾವತಿಸದಿರುವುದು ಆಡಿಟ್ ಸಂದರ್ಭದಲ್ಲಿ ಗಮನಿಸಿ, ಸೆಪ್ಟೆಂಬರ್ 97 ರವರೆಗೆ ಪಾವತಿ ಮಾಡದೇ ಇರುವ ತೆರಿಗೆಯನ್ನು ಶೇಕಡ ರೂ. 2.00 ರಂತೆ ಬಡ್ಡಿ ಲೆಕ್ಕಹಾಕಿದಾದ ಒಟ್ಟು ರೂ. 71,81,685.00ಗಳನ್ನು ಸರ್ಕಾರಕ್ಕೆ ಪಾವತಿಸುವುದು ಬಾಕಿ ಇರುತ್ತದೆ. ಈ ಮೊತ್ತವನ್ನು ಪಾವತಿ ಮಾಡಿ, ಸ್ವೀಕೃತಿಯನ್ನು ಪಡೆದುಕೊಳ್ಳುವಂತೆ ತಿಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಸರ್ಕಾರಿ ಪತ್ರದಲ್ಲಿ ಮೆ॥ ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಹಾಗೂ ಮೆ॥ ಬೊರುಕಾ ಗ್ಯಾಸಸ್ ಲಿಮಿಟೆಡ್ ಎರಡು ಬೇರೆ ಬೇರೆ ಕಂಪನಿಗಳಾಗಿದ್ದು, ಮೆ॥ ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಜಾಲಕ್ಕೆ ವಿದ್ಯುತ್ತನ್ನು ಪೂರೈಸುತ್ತಿರುವುದರಿಂದ, ಸಂಪೂರ್ಣವಾಗಿ ಈ ಯೋಜನೆಯು captive power plant ಆಗಿರುವುದಿಲ್ಲ. ಮೇಲಾಗಿ ಇಂತಹ ಪ್ರಕರಣಗಳು ಮೇಲೆ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಒಳಗೊಂಡಿರದ ಕಾರಣ, ಶಹಾಪುರ ಕಿರು ಜಲ ವಿದ್ಯುತ್ ಯೋಜನೆಗೆ ತೆರಿಗೆ ವಿನಾಯಿತಿ ನೀಡಲು ಅವಕಾಶವಿಲ್ಲವೆಂದು ಮೆ॥ ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ತಿಳಿಸಲಾಗಿತ್ತು.

ಮೆ॥ ಬೊರುಕಾ ಪವರ್ ಕಾರ್ಪೊರೇಷನ್ ಇವರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 51502/2003ನ್ನು ದಾಖಲಿಸಿ, ಈ ಕೆಳಕಂಡ ಕೋರಿಕೆಯನ್ನು ಸಲ್ಲಿಸಿದ್ದರು :–

"a) Issue a Writ of Certiorari or any other Writ Order or Direction Quashing the letter dated : 26/27.10.2003 issued by Respondent No. 2 at Annexure-X.

b) Issue a Writ of Mandamus or any other Writ, order or Direction directing the Respondents to honour the terms of the G.O.dated: 8.06.1992 at Annexure-E and

Notification date : 18-6-1997 at Annexure-U and not to make any further demands on the petitioner for payment of Electricity Tax in respect of Power supplied to the sister concerns of the Petitioner xxxxxxx"

ಸದರಿ ರಿಟ್ ಅರ್ಜಿಯು ದಿನಾಂಕ: 16.06.2010ರಂದು ಇತ್ಯರ್ಥವಾಗಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಘನ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನಲ್ಲಿ ಈ ಕೆಳಕಂಡಂತೆ ಆದೇಶವಾಗಿದೆ:–

"(i) The petitioner-corporation is at liberty to give a representation to the Government as stated above within four weeks from today and if such a representation is given, the Government in the light of the facts stated in the representation shall reconsider its decision at Annexure-X in accordance with law and to pass appropriate orders.

(ii) any amount deposited by the petitioner pursuant to the interim order of this Court dated: 4.12.2003 shall be adjusted as per the decision that would be taken by the Government.

(iii) till the reconsideration is made, respondent No. I shall not enforce the impugned demand of Rs. 71,81,685/- stated in Annexure-N.

Petition disposed of."

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಮೆ॥ ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರ ಮನವಿಯಲ್ಲಿ ವಿದ್ಯುಚ್ಛಕ್ತಿ ತೆರಿಗೆ ವಿನಾಯತಿಯನ್ನು ಮೆ॥ ಬೊರುಕಾ ಇಂಜಿನಿಯರಿಂಗ್ ಇಂಡಸ್ಟ್ರೀಸ್ ಲಿಮಿಟೆಡ್ ಮತ್ತು ಮೆ॥ ಬೊರುಕಾ ಗ್ಯಾಸಸ್ ಲಿಮಿಟೆಡ್ ಸಂಸ್ಥೆಗಳಿಗೂ ಡಿಸೆಂಬರ್ 1997 ರಿಂದ ಫೆಬ್ರವರಿ 2002ರ ಅವಧಿಗೆ ಮಂಜೂರು ಮಾಡಲು ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಅಂತಿಮ ತೀರ್ಮಾನವನ್ನು ಸರ್ಕಾರವೇ ನೀಡಬೇಕೆಂದು ಅಭಿಪ್ರಾಯಿಸಿರುತ್ತಾರೆ.

ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 145 ಎನ್‌ಸಿಇ 2004, ಬೆಂಗಳೂರು, ದಿನಾಂಕ : 04.10.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಮೆ॥ ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರ ಮನವಿಯನ್ನು ಪುರಸ್ಕರಿಸಲು ಯಾವುದೇ ಹೊಸ ಅಂಶಗಳು ಇಲ್ಲದಿರುವುದರಿಂದ ಮೆ॥ ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರು ಮೆ॥ ಬೊರುಕಾ ಇಂಜಿನಿಯರಿಂಗ್ ಇಂಡಸ್ಟ್ರೀಸ್ ಲಿಮಿಟೆಡ್ ಮತ್ತು ಮೆ॥ ಬೊರುಕಾ ಗ್ಯಾಸಸ್ ಲಿಮಿಟೆಡ್ ಸಂಸ್ಥೆಗಳಿಗೂ ಡಿಸೆಂಬರ್ 1997 ರಿಂದ ಫೆಬ್ರವರಿ 2002ರ ಅವಧಿಗೆ ವಿದ್ಯುಚ್ಛಕ್ತಿ ತೆರಿಗೆ ವಿನಾಯಿತಿ ಬಗ್ಗೆ ಸಲ್ಲಿಸಿರುವ **ಕೋರಿಕೆಯನ್ನು ತಿರಸ್ಕರಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2620

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಬಿ. ಸಂಪತ್‌ಕುಮಾರ್, ತಹಶೀಲ್ದಾರ್, ಇವರಿಗೆ ಗ್ರೇಡ್–I ವೃಂದದಲ್ಲಿ ತಹಶೀಲ್ದಾರ್ ಹುದ್ದೆಗೆ ಮುಂಬಡ್ತಿ ನೀಡಿರುವುದನ್ನು ಹಿಂದಕ್ಕೆ ಪಡೆಯುವ ಕುರಿತಂತೆ.

**ಓದಲಾಗಿದೆ :** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್ ಡಿ 50 ಎಎಸ್ ಡಿ 2009, ದಿನಾಂಕ: 05–02–2009.
(2) ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಎಡಿ ಇ 2000, ದಿನಾಂಕ: 04–07–2008.
(3) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 12 ಸೇನಿನಿ 2001, ದಿನಾಂಕ: 02–05–2001.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 50 ಎಎಸ್‌ಡಿ 2009, ದಿನಾಂಕ: 05–02–2009 ರಲ್ಲಿ ರನ್ವಯ ಶ್ರೀ ಬಿ. ಸಂಪತ್ ಕುಮಾರ್, ಹಿಂದಿನ ತಹಶೀಲ್ದಾರ್, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರಿಗಿಂತ ಜ್ಯೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎಲ್.ಜಿ. ರಂಗನಾಥರಾವ್ ಇವರಿಗೆ ತಹಶೀಲ್ದಾರ್ ಗ್ರೇಡ್–I ವೃಂದಕ್ಕೆ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 34 ಎಎಸ್ ಡಿ 2003, ದಿನಾಂಕ: 24–12–2007 ರಲ್ಲಿ ಕೆಸಿಎಸ್‌ಆರ್ ನಿಯಮ 32 ರಲ್ಲಿ ಸ್ವತಂತ್ರ ಪ್ರಭಾರದಲ್ಲಿದ್ದ ದಿನಾಂಕ: 27–01–2001 ರಿಂದ ಬಡ್ತಿ ಸಕ್ರಮಗೊಳಿಸಿದ ದಿನಾಂಕದಿಂದ ಶ್ರೀ ಬಿ.ಸಂಪತ್ ಕುಮಾರ್ ಇವರಿಗೂ ಕೂಡ ಪೂರ್ವಾನ್ವಯವಾಗಿ ತಹಶೀಲ್ದಾರ್ ಗ್ರೇಡ್–I ವೃಂದಕ್ಕೆ ಬಡ್ತಿ ನೀಡಿ ಸಕ್ರಮಗೊಳಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 04–07–2008 ರಲ್ಲಿ ಶ್ರೀ ಬಿ.ಸಂಪತ್ ಕುಮಾರ್, ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (Without Cummulative Effect) ತಡೆಯಿಡಿಯುವ ದಂಡನೆ ವಿಧಿಸಿದ್ದರಿಂದ ಅವರಿಗೆ ಗ್ರೇಡ್– I ಹುದ್ದೆಗೆ ಸಕ್ರಮಗೊಳಿಸಿರುವುದು ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 12 ಸೇನಿನಿ 2001, ದಿನಾಂಕ: 02–05–2001 ರಂತೆ ದಂಡನಾವಧಿಯಲ್ಲಿ ಮುಂಬಡ್ತಿ ನೀಡಲು ಅವಕಾಶ ಇಲ್ಲವಾದ್ದರಿಂದ ಮುಂಬಡ್ತಿಯನ್ನು ಹಿಂದಕ್ಕೆ ಪಡೆಯಲು ದಿನಾಂಕ: 27–07–2009 ರಲ್ಲಿ ನೋಟೀಸ್ ನೀಡಲಾಗಿತ್ತು. ಸದರಿ ಅಧಿಕಾರಿಯು ನೋಟೀಸ್‌ಗೆ ದಿನಾಂಕ: 02–09–2009 ರಲ್ಲಿ ಉತ್ತರ ಸಲ್ಲಿಸಿ, ಅವರಿಗೆ ವಿಧಿಸಿದ ಒಂದು ವರ್ಷದ ದಂಡನಾವಧಿ ಈಗಾಗಲೇ ಮುಕ್ತಾಯಗೊಂಡಿರುವುದರಿಂದ ಅವರಿಗೆ ಕೆಎಎಸ್ ವೃಂದಕ್ಕೆ ಮುಂಬಡ್ತಿ ನೀಡಲು ಸಿಆಸು ಇಲಾಖೆಗೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರದ ಸುತ್ತೋಲೆ ದಿನಾಂಕ: 02–05–2001 ರನ್ವಯ ಪರಿಶೀಲಿಸಲಾಗಿ, ಸರ್ಕಾರಿ ನೌಕರನ ವಿರುದ್ಧ ಇಲಾಖಾ ವಿಚಾರಣೆ ಅಥವಾ ಕ್ರಿಮಿನಲ್ ಮೊಕದ್ದಮೆ ಪ್ರಾರಂಭವಾಗಿ ಅಂತಹ ಇಲಾಖಾ ವಿಚಾರಣೆ ಅಥವಾ ಕ್ರಿಮಿನಲ್ ಮೊಕದ್ದಮೆಗಳು

ದಂಡನೆಯಲ್ಲಿ ಪರ್ಯಾವಸನಗೊಂಡಲ್ಲಿ, ಆ ದಂಡನೆಯು ಜಾರಿಯಲ್ಲಿರುವ ಅವಧಿಯಲ್ಲಿ ಅಂತಹ ಸರ್ಕಾರಿ ನೌಕರನಿಗೆ ಮುಂಬಡ್ತಿ ನೀಡಲು ಆಸ್ಪದ ಇಲ್ಲವೆಂದು ಸ್ಪಷ್ಟೀಕರಿಸಲಾಗಿದೆ.

ಶ್ರೀ ಬಿ.ಸಂಪತ್ ಕುಮಾರ್, ಇವರು ಈ ಹಿಂದೆ ಉಪ ತಹಶೀಲ್ದಾರ್ ಆಗಿ ನಾಡ ಕಛೇರಿ, ಉತ್ತರಹಳ್ಳಿ, ಬೆಂಗಳೂರು ದಕ್ಷಿಣ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಸಾರಕ್ಕಿ ಗ್ರಾಮದ ಸರ್ವೆ ನಂ.71 ರ ಜಮೀನಿಗೆ ಅಕ್ರಮ ಖಾತೆ ಮಾಡಿರುವ ಆಪಾದನೆಗೆ ಅವರಿಗೆ ದಿನಾಂಕ: 19–02–2000ರಲ್ಲಿ ದೋಷಾರೋಪಣ ಪಟ್ಟಿಯನ್ನು ಜಾರಿಮಾಡಿದ್ದು, ಈ ಪ್ರಕರಣದ ವಿಚಾರಣೆಯು ಅಂತಿಮಗೊಂಡು ವಿಚಾರಣೆಯಲ್ಲಿ ಆಪಾದನೆ ಸಾಭೀತಾಗಿದ್ದರಿಂದ, ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಎಡಿಇ 2000, ದಿನಾಂಕ: 04–07–2008 ರಲ್ಲಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು. ಇವರಿಗೆ ಪೂರ್ವಾನ್ವಯವಾಗಿ ದಿನಾಂಕ: 27–01–2001 ರಿಂದ ಮುಂಬಡ್ತಿ ನೀಡುವ ಅವಧಿಯಲ್ಲಿ ಅವರ ವಿರುದ್ಧ ಪ್ರಾರಂಭವಾದ ಇಲಾಖಾ ವಿಚಾರಣೆಯು ದಂಡನೆಯಲ್ಲಿ ಪರ್ಯಾವಸನಗೊಂಡಿರುವುದರಿಂದ ಶ್ರೀ ಬಿ. ಸಂಪತ್‌ಕುಮಾರ್, ಇವರು ಈ ಅವಧಿಯಲ್ಲಿ ಮುಂಬಡ್ತಿ ಹೊಂದಲು ಅರ್ಹರಾಗಿರುವುದಿಲ್ಲ. ಆದ್ದರಿಂದ ಅವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 50 ಎಎಸ್‌ಡಿ 2009, ದಿನಾಂಕ: 05–02–2009 ರಲ್ಲಿ ಪೂರ್ವಾನ್ವಯವಾಗಿ ದಿನಾಂಕ: 27–01–2001 ರಿಂದ ಗ್ರೇಡ್–I ವೃಂದದಲ್ಲಿ ತಹಶೀಲ್ದಾರ್ ಹುದ್ದೆಗೆ ಮುಂಬಡ್ತಿ ನೀಡಿರುವುದನ್ನು ಹಿಂದಕ್ಕೆ ಪಡೆಯಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 50 ಎಎಸ್‌ಡಿ 2009, ಬೆಂಗಳೂರು, ದಿನಾಂಕ : 06–10–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಬಿ. ಸಂಪತ್ ಕುಮಾರ್, ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. ಅವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 50 ಎಎಸ್‌ಡಿ 2009, ದಿನಾಂಕ: 05–02–2009 ರಲ್ಲಿ ಪೂರ್ವಾನ್ವಯವಾಗಿ ದಿನಾಂಕ: 27–01–2001 ರಿಂದ ಗ್ರೇಡ್–I ವೃಂದದಲ್ಲಿ ತಹಶೀಲ್ದಾರ್ ಹುದ್ದೆಗೆ ಮುಂಬಡ್ತಿ ನೀಡಿರುವುದನ್ನು ಹಿಂಪಡೆದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2621 ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಫ್.ಬಿ.ನಂದಗಡಿ, ನಿವೃತ್ತ ತಹಶೀಲ್ದಾರರು ಇವರಿಗೆ 5ನೇ ಸ್ಥಗಿತ ವೇತನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 438 ಎಎಸ್‌ಡಿ 2008 ದಿನಾಂಕ: 12–5–2009.

(2) ಮಹಾಲೇಖಪಾಲರು, ಕರ್ನಾಟಕ ರವರ ಪತ್ರ ಸಂಖ್ಯೆ: BE1/R5/Vol-518/2010-11/74 ದಿನಾಂಕ: 27–7–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ಸರ್ಕಾರದ ದಿನಾಂಕ: 12–5–2009 ರ ಆದೇಶದಲ್ಲಿ, ಶ್ರೀ ಎಫ್.ಬಿ.ನಂದಗಡಿ, ಹಿಂದಿನ ತಹಶೀಲ್ದಾರ್, ಬದಾಮಿ, ಬಾಗಲಕೋಟೆ ಜಿಲ್ಲೆ (ಪ್ರಸ್ತುತ ನಿವೃತ್ತರು) ಇವರಿಗೆ ವೇತನ ಶ್ರೇಣಿ ರೂ. 6000–11200 ರಲ್ಲಿ ದಿನಾಂಕ: 1–1–2003 ರಿಂದ ಎರಡನೇ ಸ್ಥಗಿತ ವೇತನ ಬಡ್ತಿ, ದಿನಾಂಕ: 1–1–2004 ರಿಂದ ಮೂರನೇ ಸ್ಥಗಿತ ವೇತನ ಬಡ್ತಿ, ದಿನಾಂಕ: 1–1–2005 ರಿಂದ ನಾಲ್ಕನೇ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ರವರ ದಿನಾಂಕ: 27–7–2010 ರ ಪ್ರಸ್ತಾವನೆಯಲ್ಲಿ, ಸದರಿ ಅಧಿಕಾರಿಗಳು ವೇತನ ಶ್ರೇಣಿ ರೂ. 6000–11200 ರಲ್ಲಿ ದಿನಾಂಕ: 1–3–2006 ರಿಂದ 5ನೇ ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದಾಗಿ ತಿಳಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಮೇಲ್ಕಂಡಂತೆ ಶ್ರೀ ಎಫ್.ಬಿ. ನಂದಗಡಿ, ನಿವೃತ್ತ ತಹಶೀಲ್ದಾರ್ ಇವರಿಗೆ 5ನೇ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 468 ಎಎಸ್‌ಡಿ 2010 ಬೆಂಗಳೂರು, ದಿನಾಂಕ : 5–10–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಫ್.ಬಿ. ನಂದಗಡಿ, ನಿವೃತ್ತ ತಹಶೀಲ್ದಾರರು ಇವರಿಗೆ ವೇತನ ಶ್ರೇಣಿ ರೂ. 6000–11200 ರಲ್ಲಿ ದಿನಾಂಕ: 1–3–2006 ರಿಂದ 5ನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2622 ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಸಿ. ತಾಯಪ್ಪ, ಹಿಂದಿನ ಪುರಸಭೆ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಕೊಪ್ಪಳ ಜಿಲ್ಲೆ, ಪ್ರಸ್ತುತ ನಿವೃತ್ತ ತಹಶೀಲ್ದಾರರು, ಇವರ ಹಿಂದಿನ ಸೇವೆಯನ್ನು ನಿವೃತ್ತಿ ವೇತನ ಸೌಲಭ್ಯಗಳಿಗೆ ಪರಿಗಣಿಸುವ ಕುರಿತು.

**ಓದಲಾಗಿದೆ:** 1) ಶ್ರೀ ಸಿ. ತಾಯಪ್ಪ, ನಿವೃತ್ತ ತಹಶೀಲ್ದಾರರು, ಇವರ ಮನವಿ ದಿನಾಂಕ: 16–05–2007.

2) ಅಧೀಕ್ಷಕ ಅಭಿಯಂತರರು, ಪಿ.ಹೆಚ್.ಇ ಸರ್ಕಲ್, ಗುಲ್ಬರ್ಗಾ ಇವರ ಜ್ಞಾಪನಾ ಸಂಖ್ಯೆ: ಪಿ.ಹೆಚ್.ಇ/ಇಎಸ್‌ಟಿ–1/ಎಸ್‌ಡಿಸಿ/ಆರ್‌ಇಜಿ/72–73/1550, ದಿನಾಂಕ: 19–06–1972.

3) ಸೂಪರಿಂಟೆಂಡಿಂಗ್ ಇಂಜಿನಿಯರ್, (ಎಲೆಕ್ಟ್ರಿಕ್ಶನ್) ಕೆ.ಎಸ್.ವಿ.ಬಿ, ಹುಬ್ಬಳ್ಳಿ ಸರ್ಕಲ್, ಹುಬ್ಬಳ್ಳಿ, ಇವರ ಅಧಿಕೃತ ಜ್ಞಾಪನಾ ಸಂಖ್ಯೆ ಡಿ.ಸಿ.ಎ/ಎಸ್–1/ಎ–9/27184–92, ದಿನಾಂಕ: 01–11–1973.

**ಪ್ರಸ್ತಾವನೆ :**

ಶ್ರೀ ಸಿ. ತಾಯಪ್ಪ, ಹಿಂದಿನ ಪುರಸಭೆ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಕೊಪ್ಪಳ ಜಿಲ್ಲೆ, ಪ್ರಸ್ತುತ ನಿವೃತ್ತ ತಹಶೀಲ್ದಾರರು ಇವರು ಮೇಲೆ ಓದಲಾದ ಕ್ರ.ಸಂ. (1) ರ ತಮ್ಮ ಮನವಿಯಲ್ಲಿ ತಾವು ಈ ಹಿಂದೆ ಕಂದಾಯ ಇಲಾಖೆಯಲ್ಲಿ ನೇಮಕಾತಿ ಹೊಂದುವ ಪೂರ್ವದಲ್ಲಿ ಪಿ.ಡಬ್ಲ್ಯೂ.ಡಿ.

(ಪಿ.ಹೆಚ್.ಇ) ಇಲಾಖೆಯಲ್ಲಿ ಹಾಗೂ ಕರ್ನಾಟಕ ರಾಜ್ಯ ಎಲೆಕ್ಟ್ರಿಸಿಟಿ ಮಂಡಳಿಯಲ್ಲಿ ಸಲ್ಲಿಸಿದ ಸೇವೆಯನ್ನು ಪಿಂಚಣಿ ಸೌಲಭ್ಯಕ್ಕಾಗಿ ಪರಿಗಣಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ರ ಜ್ಞಾಪನಾ ದಿನಾಂಕ: 19-06-1972 ರನ್ವಯ ದಿನಾಂಕ: 30-08-1968 ರಿಂದ ಸ್ಥಳೀಯ ಅಭ್ಯರ್ಥಿಯಾಗಿ ದ್ವಿತೀಯ ದರ್ಜೆ ಸಹಾಯಕರಾಗಿ ನೇಮಕಗೊಂಡಿರುವ ಸ್ಥಳೀಯ ಅಭ್ಯರ್ಥಿಯಾಗಿ ಸಲ್ಲಿಸಿದ ಸೇವೆಯನ್ನು ಸಕ್ರಮಗೊಳಿಸಿ ಆದೇಶಿಸಿದೆ. ಸದರಿ ಇಲಾಖೆಯಿಂದ ದಿನಾಂಕ: 07-12-1973 ರಂದು ಬಿಡುಗಡೆ ಹೊಂದಿ ನಂತರ ಮೇಲೆ ಓದಲಾದ ಕ್ರ.ಸಂ. (3) ರ ದಿನಾಂಕ: 01-11-1973 ರ ಅಧಿಕೃತ ಜ್ಞಾಪನಾದಂತೆ ಕರ್ನಾಟಕ ವಿದ್ಯುತ್‌ಚ್ಛಕ್ತಿ ಮಂಡಳಿಯಲ್ಲಿ ಸ್ಟೋರ್ ಕೀಪರ್ ಆಗಿ ನೇಮಕಗೊಂಡು, ದಿನಾಂಕ: 24-11-1977 ರವರೆಗೆ ಸೇವೆ ಸಲ್ಲಿಸಿರುತ್ತಾರೆ. ಸದರಿ ಅವಧಿಯ ಈ ಸೇವೆಯನ್ನು ಪ್ರಸ್ತುತ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸದರಿ ಅವಧಿಯಲ್ಲಿನ ಅವರ ವೇತನ ಇತ್ಯಾದಿಗಳನ್ನು ಪಡೆದಂತಹ Barwad Extract ನ್ನು ಪರಿಶೀಲಿಸಿ ಅದರಲ್ಲಿ ದಿನಾಂಕ: 01-09-1971 ರಿಂದ 07-12-1973 ರವರೆಗಿನ ಕರ್ನಾಟಕ ರಾಜ್ಯ ಸರ್ಕಾರದ ಪಿ.ಡಬ್ಲ್ಯೂ.ಡಿ. (ಪಿ.ಹೆಚ್.ಇ) ಇಲಾಖೆಯಲ್ಲಿ ಸಲ್ಲಿಸಿರುವ ಸೇವೆಯನ್ನು ಮಾತ್ರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ. ಆರ್‌ಡಿ 03 ಎಎಸ್‌ಡಿ 2008, ಬೆಂಗಳೂರು, ದಿನಾಂಕ : 30-09-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿ. ತಾಯಪ್ಪ, ಹಿಂದಿನ ಪುರಸಭೆ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಕೊಪ್ಪಳ ಜಿಲ್ಲೆ, ಪ್ರಸ್ತುತ ನಿವೃತ್ತ ತಹಶೀಲ್ದಾರರು ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ದಿನಾಂಕ: 01-09-1971 ರಿಂದ 07-12-1973 ರವರೆಗೆ ರಾಜ್ಯ ಸರ್ಕಾರದ ಪಿ.ಡಬ್ಲ್ಯೂ.ಡಿ. (ಪಿ.ಹೆಚ್.ಇ) ಇಲಾಖೆಯಲ್ಲಿ ಸಲ್ಲಿಸಿರುವ ಸೇವೆಯ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 224-ಎ ರನ್ವಯ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ಸೇವೆಗಳು-3) ರವರ ಟಿಪ್ಪಣಿ ಸಂಖ್ಯೆ ಆ.ಇ.1154 ಸೇ.3/10, ದಿನಾಂಕ: 02-08-2010ರ ಸಹಮತದೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 2623

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ವರ್ಧಮಾನ ಸ್ಥಾನಿಕ ಜೈನ ಸಂಘ, ಇನ್‌ಫೆಂಟ್ರ ರಸ್ತೆ, ಬೆಂಗಳೂರು ಈ ಸಂಘಕ್ಕೆ ನೇಮಿಸಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಇ 143 ಸಸಂನೋ 2009 ದಿನಾಂಕ: 29/03/2010.
2) ಆಡಳಿತಾಧಿಕಾರಿಗಳು, ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರ ರಸ್ತೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಆರ್‌ಬಿ-1/ಸಿಬ್ಬಂದಿ/ಶ್ರೀವಸ್ಥಾಜೈಸಂ.ಆ/2010-11 ದಿನಾಂಕ: 25/08/2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ದಿನಾಂಕ: 29/03/2010 ರ ಆದೇಶದಲ್ಲಿ ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರ ರಸ್ತೆ, ಬೆಂಗಳೂರು ಈ ಸಂಸ್ಥೆಗೆ **ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರನ್ವಯ** ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ-1, ಬೆಂಗಳೂರು** ಇವರನ್ನು ಆಡಳಿತಾಧಿಕಾರಿಯನ್ನಾಗಿ ಆರು (6) ತಿಂಗಳ ಅವಧಿಗೆ ನೇಮಿಸಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರಿಯನ್ನು ಹಸ್ತಾಂತರಿಸುವಂತೆ ಸೂಚಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 25/08/2010 ರ ಪತ್ರದಲ್ಲಿ ಆಡಳಿತಾಧಿಕಾರಿಗಳು, ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರ ರಸ್ತೆ, ಬೆಂಗಳೂರು ರವರು ದಿನಾಂಕ: 30/03/2010 ರಂದು ಪ್ರಭಾರವನ್ನು ವಹಿಸಿಕೊಂಡು ಕಾರ್ಯ ನಿರ್ವಹಿಸುತ್ತಿದ್ದು, ಪ್ರಸ್ತುತ ಸಂಘದ ಆವರಣದಲ್ಲಿ ಜೈನ ಧರ್ಮದ ಮುನಿಪೂಜ್ಯರವರ ನೇತೃತ್ವದಲ್ಲಿ ನಾಲ್ಕು ತಿಂಗಳುಗಳ ಕಾಲ ಚಾತುರ್ಮಾಸ ಕಾರಣ, ಲೆಕ್ಕಪತ್ರಗಳನ್ನು ಸನ್ನದು ಲೆಕ್ಕಿಗರವರಿಗೆ ಲೆಕ್ಕ ಪರಿಶೋಧನೆಗಾಗಿ ದಾಖಲಾತಿಗಳನ್ನು ಒದಗಿಸಲಾಗಿದ್ದು, ಸದರಿ ಲೆಕ್ಕ ಪರಿಶೋಧನಾ ಕಾರ್ಯವು ಪರಗತಿಯಲ್ಲಿದ್ದು, ಇನ್ನು ಎರಡು ತಿಂಗಳ ಕಾಲಾವಕಾಶದಲ್ಲಿ ಮುಗಿಯುವ ಸಂಭವವಿದ್ದು, ಸಂಘದ ಆಡಳಿತ ಮಂಡಳಿ ರದ್ದತೆ ಬಗ್ಗೆ ಇನ್ನೂ ನ್ಯಾಯಾಲಯದಲ್ಲಿ ವಿಚಾರಣೆ ನಡೆಯುತ್ತಿರುವುದರಿಂದ, ಸಂಘದ ಆಡಳಿತಾಧಿಕಾರಿಗಳ ಕಾಲಾವಧಿಯನ್ನು ಮುಂದಿನ ಆರು ತಿಂಗಳ ಕಾಲಾವಧಿಗೆ ವಿಸ್ತರಿಸಿಕೊಡಬೇಕೆಂದು ಆಡಳಿತಾಧಿಕಾರಿಗಳು ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿಗಳ ಅವಧಿಯು ದಿನಾಂಕ: 30/09/2010 ರಂದು ಮುಕ್ತಾಯಗೊಳ್ಳಲಿರುವುದರಿಂದ, ಸದರಿ ಆಡಳಿತಾಧಿಕಾರಿಗಳ ಅವಧಿಯನ್ನು ಇನ್ನು ಆರು (6) ತಿಂಗಳ ಅವಧಿಗೆ ವಿಸ್ತರಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸ ಇ 143 ಸಸಂನೋ 2009 ಬೆಂಗಳೂರು, ದಿನಾಂಕ : 27ನೇ ಸೆಪ್ಟೆಂಬರ್, 2010.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 (ಎ) ರ ಪ್ರಕಾರ ಶ್ರೀ ವರ್ಧಮಾನ ಸ್ಥಾನಿಕವಾಸಿ ಜೈನ ಸಂಘ, ಇನ್‌ಫೆಂಟ್ರ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿಯಾಗಿ ನೇಮಿಸಿರುವ ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ-1, ಬೆಂಗಳೂರು ಇವರ ಅವಧಿಯನ್ನು ದಿನಾಂಕ: 30/09/2010 ರಿಂದ ಮತ್ತೆ ಆರು (6) ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರಿಯನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ-2
ಸಹಕಾರ ಇಲಾಖೆ

ಪಿ.ಆರ್. 2624

## ಸಹಕಾರ ಸಚಿವಾಲಯ

**ವಿಷಯ :** ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ರಾಯಚೂರು ಇವರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಒ 46 ಸಿಎಲ್‌ಎಂ 2010, ದಿನಾಂಕ: 10.03.2010 ಮತ್ತು 28.06.2010.
2. ನಬಾರ್ಡಿನ ಪತ್ರ ಸಂಖ್ಯೆ: ಎನ್‌ಬಿ.ಕೆಎ.ಐಡಿಡಿ/1832/ಎಸ್‌ಟಿ 82/2010–11, ದಿನಾಂಕ: 30.09.2010.

**ಪ್ರಸ್ತಾವನೆ :**

ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ರಾಯಚೂರು ಇದರ ಆಡಳಿತ ಸಮಿತಿಗೆ ದಿನಾಂಕ: 10.04.2010ರೊಳಗೆ ನಡೆಸಬೇಕಾಗಿದ್ದ ಚುನಾವಣೆಯನ್ನು ದಿ: 31.07.2010ರೊಳಗೆ ಹಾಗೂ ತದನಂತರ ದಿನಾಂಕ: 31.10.2010ರವರೆಗೆ ಓದಲಾದ (1)ರ ಆದೇಶ ಸಂಖ್ಯೆಯಲ್ಲಿ ಅನುಮತಿ ನೀಡಲಾಗಿದೆ. ಈಗ ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ವಿಭಜನೆಯ ಕುರಿತು ಪ್ರಸ್ತಾವನೆಯನ್ನು ಅಂತಿಮವಾಗಿ ನಬಾರ್ಡು ಭಾರತೀಯ ರಿಸರ್ವ್ ಬ್ಯಾಂಕಿಗೆ ಸಲ್ಲಿಸಲಾಗಿದೆ. ಆದರೆ, ಇದರ ಬಗ್ಗೆ ನಿರ್ಣಯ / ಆದೇಶ ಹೊರಡಿಸಲು ಇನ್ನು ಸ್ವಲ್ಪ ಕಾಲಾವಕಾಶ ಬೇಕಾಗುತ್ತದೆಂದು ಸರ್ಕಾರದ ಗಮನಕ್ಕೆ ತರಲಾಗಿದೆ. ಈ ಕುರಿತು ಈಗ ಚುನಾವಣೆ ಜರುಗಿಸಿದಲ್ಲಿ ಮತ್ತೆ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳಿಗೆ ಪ್ರತ್ಯೇಕವಾಗಿ ಕೇಂದ್ರ ಸಹಕಾರ ಬ್ಯಾಂಕುಗಳನ್ನು ಸ್ಥಾಪಿಸಲು ಅನುಮತಿ ದೊರೆತ ನಂತರ ಮತ್ತೆ ಚುನಾವಣೆ ಜರುಗಿಸಬೇಕಾಗುತ್ತದೆ. ಇದರಿಂದ ಅನಾವಶ್ಯಕವಾಗಿ ಚುನಾವಣೆ ಜರುಗಿಸುವ ಸಲುವಾಗಿ ವೆಚ್ಚವನ್ನು ಮಾಡಬೇಕಾಗುತ್ತದೆ. ಈ ಅನಾವಶ್ಯಕ ವೆಚ್ಚವನ್ನು ತಪ್ಪಿಸಲು, ಸಾರ್ವಜನಿಕ ಹಾಗೂ ಬ್ಯಾಂಕಿನ ದೃಷ್ಟಿಯಿಂದ ಚುನಾವಣೆಯನ್ನು ಮುಂದೂಡುವುದು ಅವಶ್ಯಕವಾಗಿರುತ್ತದೆ.

ಈ ಕುರಿತು ನಬಾರ್ಡಿನೊಂದಿಗೆ ಸಮಾಲೋಚಿಸಲಾಗಿದೆ. ಹಾಗೂ ನಬಾರ್ಡು ಈ ಪ್ರಸ್ತಾವನೆಗೆ ತನ್ನ ಸಹಮತಿಯನ್ನು ಉಲ್ಲೇಖ(2)ರ ಪತ್ರದಲ್ಲಿ ನೀಡಿರುತ್ತದೆ. ಆದುದರಿಂದ, ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿ ಒ 46 ಸಿಎಲ್‌ಎಂ 2010, ದಿನಾಂಕ : 04.10.2010**

ಮೇಲಿನ ಪರಿಸ್ಥಿತಿಯಲ್ಲಿ, **ರಾಯಚೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ರಾಯಚೂರು** ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣದ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಸದರಿ ಬ್ಯಾಂಕಿನ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ: 31.01.2011ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ :**

ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31.01.2011ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ.

ಪಿ.ಆರ್. 2625

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಶಿವಾನಂದ, ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರಿಗೆ ಸಹಾಯಕ ಪ್ರಾಧ್ಯಾಪಕರ ವೃಂದದಲ್ಲಿ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 57 ಎಂಎಂಸಿ 2001 ದಿನಾಂಕ: 19.04.2001
2. ಸರ್ಕಾರಿ ಆದೇಶ ಸಂಖ್ಯೆ: ಆಕುಕ 86 ಎಂಎಂಸಿ 2006 ದಿನಾಂಕ: 11.04.2008
3. ಪತ್ರ ಸಂಖ್ಯೆ: ಎಸ್ ಆರ್ ಓ(1)/05/08–09 ದಿನಾಂಕ: 2–5–2008
4. ದಿನಾಂಕ: 03.05.2008ರ ಇಲಾಖಾ ಪದೋನ್ನತಿ ಸಮಿತಿ ಸಭೆಯ ನಡವಳಿಗಳು
5. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 137 ಎಂಎಂಸಿ 2008 ದಿನಾಂಕ: 02.06.2008
6. ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 35 ಎಂಎಂಸಿ 2006 ದಿನಾಂಕ: 31.07.2006
7. ಡಾ: ಶಿವಾನಂದ, ಪ್ರಾಧ್ಯಾಪಕರು, ಇವರ ಮನವಿ ದಿನಾಂಕ: 30.10.2009
8. ಸರ್ಕಾರದ ಪತ್ರ ಸಂಖ್ಯೆ: ಆಕುಕ 157 ಎಂಎಂಸಿ 2008 ದಿನಾಂಕ: 03.12.2009
9. ಪತ್ರ ಸಂಖ್ಯೆ: ಪಿಎಸ್‌ಸಿ 155 ಸಿಎನ್‌ಎನ್ 2009 ದಿನಾಂಕ: 06.05.2010

**ಪ್ರಸ್ತಾವನೆ :**

ಡಾ: ಶಿವಾನಂದ, ಉಪನ್ಯಾಸಕರು, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರಿಗೆ ವೇತನ ಶ್ರೇಣಿ ರೂ. 12,000–18,300ರಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 32ರ ಅಡಿ ಶಸ್ತ್ರ ಚಿಕಿತ್ಸಾ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಸ್ವತಂತ್ರ ಪ್ರಭಾರದಲ್ಲಿಟ್ಟು ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರಿನಲ್ಲಿ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಮುಂದುವರೆಸಲಾಗಿದೆ.

ಶ್ರೀ ನಂಜೇಗೌಡ ಎಂಬ ರೋಗಿಗೆ ಸರಿಯಾದ ಚಿಕಿತ್ಸೆ ನೀಡದೆ ಸಾವನ್ನಪ್ಪಿರುತ್ತಾರೆಂಬ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಸತ್ಯ ಶೋಧನಾ ಸಮಿತಿ ವರದಿಯನ್ವಯ ಡಾ: ಶಿವಾನಂದ, ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಮಹಾವಿದ್ಯಾಲಯರವರನ್ನೊಳಗೊಂಡಂತೆ ಒಟ್ಟು 11 ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಗೆ ಒಳಪಡಿಸಲಾಗಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214(ಎ)(1)

ಮತ್ತು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳ ನಿಯಮ 13ರೊಂದಿಗೆ ಓದಿಕೊಂಡ ನಿಯಮ 11 ಎ ಪ್ರಕಾರ ಆಪಾದಿತ ಸರ್ಕಾರಿ ಅಧಿಕಾರಿಯಾದ

ಡಾ: ಶಿವಾನಂದ, ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗರವರ ವಿರುದ್ಧ ಆರೋಪಗಳನ್ನು ಕೈಬಿಟ್ಟು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದೋಷಮುಕ್ತರನ್ನಾಗಿ ಮಾಡಲಾಗಿತ್ತು.

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರು ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರದಲ್ಲಿ ಡಾ: ಶಿವಾನಂದ, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ) ಜನರಲ್ ಸರ್ಜರಿ, ಇವರು ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಪದೋನ್ನತಿ ನೀಡಬೇಕೆಂದು ಕೋರಿರುವುದಾಗಿ ತಿಳಿಸಿ, ಡಾ: ಶಿವಾನಂದರವರ ವಿರುದ್ಧ ಆರೋಪಗಳನ್ನು ಕೈಬಿಟ್ಟು ದೋಷಮುಕ್ತರನ್ನಾಗಿ ಮಾಡಿರುವುದರಿಂದ ಡಾ: ಶಿವಾನಂದರವರಿಗಿಂತ ಜ್ಯೇಷ್ಠತೆಯಲ್ಲಿ ಕಿರಿಯರಾಗಿರುವ ಡಾ: ಎಂ.ಕೆ. ರಮೇಶ್ ರವರು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಪದೋನ್ನತಿ ನೀಡಲು ಕೋರಿರುತ್ತಾರೆ.

ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪದೋನ್ನತಿ ಸಮಿತಿ ಸಭೆಯ ನಡವಳಿಯಲ್ಲಿ ಡಾ: ಶಿವಾನಂದ, ಜನರಲ್ ಸರ್ಜರಿ ಇವರಿಗೆ ದಿನಾಂಕ: 31.07.2006ರಿಂದ ಸಹಾಯಕ ಪ್ರಾಧ್ಯಾಪಕರಾಗಿ ಮತ್ತು ದಿನಾಂಕ: 13.02.2008 ರಿಂದ ಪ್ರಾಧ್ಯಾಪಕರಾಗಿ ಸ್ಥಾನಪನ್ನ ಮುಂಬಡ್ತಿಯನ್ನು ಪೂರ್ವಾನ್ವಯವಾಗಿ ನೀಡಲು ತೀರ್ಮಾನಿಸಲಾಗಿದೆ.

ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಡಾ: ಶಿವಾನಂದ, ಸಹಾಯಕ ಪ್ರಾಧ್ಯಾಪಕರು, ಜನರಲ್ ಸರ್ಜರಿ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರಿಗೆ ರೂ.16,400–20,000ರ ವೇತನ ಶ್ರೇಣಿಯ ಪ್ರಾಧ್ಯಾಪಕರ ವೃಂದಕ್ಕೆ ಸ್ಥಾನಪನ್ನ ಮುಂಬಡ್ತಿ ನೀಡಿ ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ನೇಮಿಸಲಾಗಿದೆ.

ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಡಾ: ಕೆ.ರಮೇಶ್, ಶಸ್ತ್ರ ಚಿಕಿತ್ಸೆ ಶಾಸ್ತ್ರ ವಿಭಾಗ, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ), ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರಿಗೆ 12,000–18,300 ರೂ.ಗಳ ಎಐಸಿಟಿಇ ವೇತನ ಶ್ರೇಣಿಯ ಶಸ್ತ್ರ ಚಿಕಿತ್ಸಾ ಶಾಸ್ತ್ರ, ಸಹಾಯಕ ಪ್ರಾಧ್ಯಾಪಕರ ಸ್ಥಾನಪನ್ನ ಹುದ್ದೆಗೆ ಮುಂಬಡ್ತಿ ನೀಡಲಾಗಿದೆ.

ಡಾ: ಶಿವಾನಂದ, ಪ್ರಾಧ್ಯಾಪಕರು, ಜನರಲ್ ಸರ್ಜರಿ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರು ಕ್ರಮ ಸಂಖ್ಯೆ(7)ರಲ್ಲಿ ಓದಲಾದ ಮನವಿಯಲ್ಲಿ, ಅಧಿಸೂಚನೆ ಸಂಖ್ಯೆ: ಆಕುಕ 137 ಎಂಎಂಸಿ 2008 ದಿನಾಂಕ: 02.06.2008ರನ್ವಯ ಪ್ರಾಧ್ಯಾಪಕರಾಗಿ ಸರ್ಜರಿ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಈ ಹುದ್ದೆಗೆ ಪದೋನ್ನತಿ ನೀಡುವ ಮುಂಚೆ ಸ್ವತಂತ್ರ ಪ್ರಭಾರ ಸಹಾಯಕ ಪ್ರಾಧ್ಯಾಪಕರಾಗಿ ಕೆಲಸ ನಿರ್ವಹಿಸುತ್ತಿದ್ದು, ಸಹಾಯಕ ಪ್ರಾಧ್ಯಾಪಕರಾಗಿ ಸ್ಥಾನಪನ್ನ ಮುಂಬಡ್ತಿ ಪಡೆದಿರುವ ಆದೇಶವನ್ನು ನೀಡಲು ಮಹಾಲೇಖಪಾಲರು ಕೋರಿರುವುದಾಗಿ ತಿಳಿಸಿ, ಪೂರ್ವಾನ್ವಯವಾಗಿ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿಯನ್ನು ನೀಡಲು ಕೋರಿರುತ್ತಾರೆ.

ಡಾ: ಶಿವಾನಂದ, ಪ್ರಾಧ್ಯಾಪಕರುರವರಿಗೆ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳಿಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ ಮೇಲೆ (8)ರಲ್ಲಿ ಓದಲಾದ ಸರ್ಕಾರದ ಪತ್ರಗಳಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗವು ಮೇಲೆ (9)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ: ಶಿವಾನಂದರವರಿಗೆ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಡಾ: ಎಂ.ಕೆ.ರಮೇಶ್ ಇವರಿಗೆ ಸಹಾಯಕ ಪ್ರಾಧ್ಯಾಪಕರಾಗಿ ಮುಂಬಡ್ತಿ ನೀಡಿದ ದಿನಾಂಕ: 31.07.2006ರಿಂದ ಪೂರ್ವಾನ್ವಯ ಬಡ್ತಿ ನೀಡಲು ಉದ್ದೇಶಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಡಾ: ಶಿವಾನಂದ, ಸಹಾಯಕ ಪ್ರಾಧ್ಯಾಪಕರು (ಸ್ವತಂತ್ರ ಪ್ರಭಾರ), ಶಸ್ತ್ರ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರುರವರಿಗೆ ದಿನಾಂಕ: 31.07.2006ರಿಂದ ಜಾರಿಗೆ ಬರುವಂತೆ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 137 ಎಂಎಂಸಿ 2008 ಬೆಂಗಳೂರು, ದಿನಾಂಕ: 13–10–2010**

ಕರ್ನಾಟಕ ನಾಗರೀಕ ಸೇವಾ (ಆರ್‌ಪಿಪಿ) ನಿಯಮಗಳು 1978ರ ನಿಯಮ 2(1)(ಎ) ಪ್ರಕಾರ ಡಾ: ಶಿವಾನಂದ, ಸಹಾಯಕ ಪ್ರಾಧ್ಯಾಪಕರು, ಶಸ್ತ್ರ ಚಿಕಿತ್ಸಾ ವಿಭಾಗ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಇವರಿಗೆ ಜ್ಯೇಷ್ಠತೆಯಲ್ಲಿ ಕಿರಿಯರಾದ ಡಾ: ಕೆ. ರಮೇಶ್, ಶಸ್ತ್ರ ಚಿಕಿತ್ಸಾ ಶಾಸ್ತ್ರರವರಿಗೆ, ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಮುಂಬಡ್ತಿ ನೀಡಿದ ದಿನಾಂಕ: 31.07.2006ರಿಂದ ಜಾರಿಗೆ ಬರುವಂತೆ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ಪೂರ್ವಾನ್ವಯ ಮುಂಬಡ್ತಿ ನೀಡಲಾಗಿದೆ.

ಸಹಾಯಕ ಪ್ರಾಧ್ಯಾಪಕರ ವೃಂದದ ಜ್ಯೇಷ್ಠತಾ ಪಟ್ಟಿಯಲ್ಲಿ ಡಾ: ಶಿವಾನಂದ ಇವರ ಹೆಸರನ್ನು ಡಾ: ಕೆ.ರಮೇಶ್‌ರವರ ಹೆಸರಿನ ಮೇಲೆ ಇಟ್ಟು ಪ್ರತಿಷ್ಠಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬಿ. ಧನಂಜಯಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ವೈದ್ಯಕೀಯ ಶಿಕ್ಷಣ)

ಪಿ.ಆರ್. 2626

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ಮಾನವ ತಳಿ ಶಾಸ್ತ್ರ ಕೇಂದ್ರಕ್ಕೆ ಇಡಗಂಟು ನಿಧಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 60 ಎಡಿಎಂ 2008, ದಿ: 31–3–09.

(2) ನಿರ್ದೇಶಕರು ಮಾನವ ತಳಿಶಾಸ್ತ್ರ ಕೇಂದ್ರ, ಬೆಂಗಳೂರು, ಇವರ ಪತ್ರಗಳ ದಿನಾಂಕ: 09–06–2010 ಹಾಗೂ 02–07–2010.

**ಪ್ರಸ್ತಾವನೆ :**

ಸಹಸ್ರಮಾನ ಜೈವಿಕ ತಂತ್ರಜ್ಞಾನ ನೀತಿಯಲ್ಲಿ ಘೋಷಿಸಿದಂತೆ, ಬೆಂಗಳೂರು ನಗರದಲ್ಲಿ ಮಾನವ ತಳಿಶಾಸ್ತ್ರ ಕೇಂದ್ರವನ್ನು ಸ್ಥಾಪಿಸಲಾಗಿದೆ, ಹಾಗೂ 2003–04ನೇ ಸಾಲಿನಿಂದ ಕೇಂದ್ರದ ಕಾರ್ಯ ಚಟುವಟಿಕೆಗಾಗಿ ಆರ್ಥಿಕ ಸಹಾಯ ಧನವನ್ನು ಆಗಿಂದಾಗ್ಗೆ ಬಿಡುಗಡೆ ಮಾಡಲಾಗುತ್ತಿದೆ.

ದಿನಾಂಕ: 18.2.2009 ರಂದು ಮಾನ್ಯ ಮುಖ್ಯಮಂತ್ರಿಗಳು ಬೆಂಗಳೂರು ಎಲೆಕ್ಟ್ರಾನಿಕ್ ಸಿಟಿಯ ಬಯೋಟೆಕ್ ಪಾರ್ಕ್‌ನಲ್ಲಿ ಐಬಿಎಬಿ ಮತ್ತು ಸಿ.ಹೆಚ್.ಜಿ ಕಟ್ಟಡದ ಉದ್ಘಾಟನಾ ಸಮಾರಂಭದಲ್ಲಿ ನೀಡಿದ ಆಶ್ವಾಸನೆಯಂತೆ, ಮೇಲೆ [1]ರಲ್ಲಿ ಓದಲಾದ ದಿನಾಂಕ: 31–3–2009ರ ಸರ್ಕಾರದ ಆದೇಶದಲ್ಲಿ

2008–09ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ **"3451–00–090–2–01–059 – ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ"** ಇದರ ಅಡಿಯಲ್ಲಿ ಲಭ್ಯವಿದ್ದ ರೂ. 100 ಲಕ್ಷಗಳು ಹಾಗೂ ಲೆಕ್ಕಶೀರ್ಷಿಕೆ **"3451–00–090–0–08–059"** ಇದರಡಿ ಉಳಿತಾಯದ ಮೊತ್ತದಿಂದ ಲೆಕ್ಕಶೀರ್ಷಿಕೆ **"3451–00–090–2–01–059 – ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ"** ಇಲ್ಲಿಗೆ ಮರುಹೊಂದಾಣಿಕೆ ಮೂಲಕ ರೂ. 100 ಲಕ್ಷಗಳು ಈ ರೀತಿ ಒಟ್ಟು ರೂ. 200 ಲಕ್ಷಗಳ ಇಡುಗಂಟು ನಿಧಿಯನ್ನು ಮಾನವ ತಳಿಶಾಸ್ತ್ರ ಕೇಂದ್ರಕ್ಕೆ ಬಿಡುಗಡೆ ಮಾಡಲಾಗಿದೆ.

ನಿರ್ದೇಶಕರು, ಮಾನವ ತಳಿಶಾಸ್ತ್ರ ಕೇಂದ್ರ, ಬೆಂಗಳೂರು ಇವರು ಮೇಲೆ [2]ರಲ್ಲಿ ಓದಲಾದ ಪತ್ರಗಳಲ್ಲಿ ಮಾನವ ತಳಿಶಾಸ್ತ್ರ ಕೇಂದ್ರದ [Centre for Human Genetics] ಚಟುವಟಿಕೆಗಳನ್ನು ಯಶಸ್ವಿಯಾಗಿ ಮುಂದುವರೆಸಿಕೊಂಡು ಹೋಗಲು ಕೇಂದ್ರಕ್ಕೆ ಆರ್ಥಿಕ ನೆರವಾಗಿ ರೂ. 300.00 ಲಕ್ಷಗಳ ಇಡಗಂಟು ನಿಧಿಯನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಮಾನವ ತಳಿಶಾಸ್ತ್ರ ಕೇಂದ್ರವನ್ನು [Centre for Human Genetics] ಸ್ಥಾಪಿಸಲು ಬೆಂಗಳೂರಿನ ಬಯೋಟೆಕ್ನಾಲಜಿ ಪಾರ್ಕ್‌ನಲ್ಲಿ ಸರ್ಕಾರದ ವತಿಯಿಂದ ಸ್ಥಳಾವಕಾಶವನ್ನು ಒದಗಿಸಲಾಗಿದ್ದು, ಸದರಿ ಕೇಂದ್ರವು ಸಂಶೋಧನೆ ಮತ್ತು ತರಬೇತಿ ನೀಡುವಲ್ಲಿ ಪ್ರಶಂಸನೀಯ ಸೇವೆ ಸಲ್ಲಿಸುತ್ತಿದ್ದು ಸದರಿ ಕೇಂದ್ರವು ತನ್ನ ಚಟುವಟಿಕೆಗಳನ್ನು ಯಶಸ್ವಿಯಾಗಿ ಮುಂದುವರಿಸಿಕೊಂಡು ಹೋಗಲು ಸದರಿ ಸಂಸ್ಥೆಗೆ ರೂ. 3.00 ಕೋಟಿ ಇಡುಗಂಟು ನಿಧಿಯನ್ನು (Corpus Fund) ಲೆಕ್ಕಶೀರ್ಷಿಕೆ **"3451–00–090–2–01–059 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ (ಯೋಜನೆ)"** ಇದರಡಿ 2010–11ನೇ ಸಾಲಿನ ಪೂರಕ ಅಂದಾಜುಗಳ 2ನೇ ಕಂತಿನಲ್ಲಿ ಹೆಚ್ಚುವರಿಯಾಗಿ ಒದಗಿಸಲ್ಪಡುವ ಅನುದಾನದಲ್ಲಿ ಭರಿಸುವುದಕ್ಕೆ ಒಳಪಟ್ಟು ಮಂಜೂರು ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 86 ಎಡಿಎಂ 2010, ಬೆಂಗಳೂರು, ದಿನಾಂಕ: 14–10–2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಲೆಕ್ಕಶೀರ್ಷಿಕೆ **"3451–00–090–2–01–059 – ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ"** ಇದರ ಅಡಿಯಲ್ಲಿ 2010–11ನೇ ಸಾಲಿನ ಪೂರಕ ಅಂದಾಜುಗಳ 2ನೇ ಕಂತಿನಲ್ಲಿ ಹೆಚ್ಚುವರಿಯಾಗಿ ಒದಗಿಸಲ್ಪಡುವ ಅನುದಾನದಲ್ಲಿ ಭರಿಸುವುದಕ್ಕೆ ಒಳಪಟ್ಟು ರೂ. 300 ಲಕ್ಷಗಳ [ರೂ. ಮುನ್ನೂರು ಲಕ್ಷಗಳು ಮಾತ್ರ] ಇಡುಗಂಟು ನಿಧಿಯನ್ನು 2010–11ನೇ ಸಾಲಿಗೆ ಮಾನವ ತಳಿಶಾಸ್ತ್ರ ಕೇಂದ್ರಕ್ಕೆ [Centre for Human Genetics] ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರ ಮೂಲಕ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ಸದರಿ ಅನುದಾನದ ಬಳಕೆಯ ಬಗ್ಗೆ ನಿರ್ದೇಶಕರು, ಮಾನವ ತಳಿಶಾಸ್ತ್ರ ಕೇಂದ್ರ ಇವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳೊಂದಿಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 348 ವೆಚ್ಚ–2/2010, ದಿನಾಂಕ: 24–9–2010ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 2627

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 'ಬೆಂಗಳೂರು ಐ.ಟಿ. ಬಿಜ್ – 2010'ರ ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಲಾಗಿರುವ ಮಾಹಿತಿ ತಂತ್ರಜ್ಞಾನದಲ್ಲಿ ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ ಕಾರ್ಯಕ್ರಮಕ್ಕೆ ಅನುದಾನ ಬಿಡುಗಡೆ ಬಗ್ಗೆ – ಆದೇಶ.

**ಓದಲಾಗಿದೆ :** ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶಕರ ಪತ್ರದ ಸಂಖ್ಯೆ: ಮಾತಂ ಮತ್ತು ಜೈತಂನಿ/ಲೆಕ್ಕ–1/25/ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ/570/2010–11 ದಿನಾಂಕ: 23–09–2010.

**ಪ್ರಸ್ತಾವನೆ :**

ಮಾತಂ ಜೈತಂ ಹಾಗೂ ವಿತಂ ಇಲಾಖೆಯು ಪ್ರತಿ ವರ್ಷದಂತೆ ಬೆಂಗಳೂರು ಐಟಿ ಬಿಜ್ 2010 ಮೇಳದ ಅಂಗವಾಗಿ ರಾಜ್ಯಾದ್ಯಂತ ಗ್ರಾಮೀಣ ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ ಕಾರ್ಯಕ್ರಮವನ್ನು ಈ ವರ್ಷವೂ ಏರ್ಪಡಿಸುತ್ತಿದೆ.

ಮೇಲೆ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶಕರ ಪತ್ರದಲ್ಲಿ **'ಬೆಂಗಳೂರು ಐ.ಟಿ. ಬಿಜ್ – 2010'** ಮೇಳದ ಅಂಗವಾಗಿ ಗ್ರಾಮೀಣ ವಿದ್ಯಾರ್ಥಿಗಳಲ್ಲಿ ಅಂತರ್ಜಾಲ ಪ್ರಪಂಚದ ಪ್ರಯೋಜನಗಳು ಮತ್ತು ಇತ್ತೀಚಿನ ದಿನಗಳಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಉಂಟಾಗಿರುವ ತಂತ್ರಜ್ಞಾನ ಬದಲಾವಣೆಗಳ ಅರಿವು ಮೂಡಿಸುವ ಸಲುವಾಗಿ ನಡೆಸಲು ಉದ್ದೇಶಿಸಿರುವ **'ಗ್ರಾಮೀಣ ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ'ದ** ಕಾರ್ಯಕ್ರಮಕ್ಕಾಗಿ ವಿದ್ಯಾರ್ಥಿಗಳ/ ಉಪಾಧ್ಯಾಯರ/ ಪೋಷಕರ ಸಾರಿಗೆ ವೆಚ್ಚ, ಊಟ, ವಸತಿ ಮತ್ತು ಸಭಾಂಗಣ/ಬ್ರೋಚರ್, ಬ್ಯಾನರ್, ಬ್ರಾಡ್‌ಬ್ಯಾಂಡ್ ಜೋಡಣೆ ಇನ್ನಿತರೆ ವೆಚ್ಚಗಳನ್ನು ಭರಿಸಲು ಪ್ರತಿ ಜಿಲ್ಲಾಧಿಕಾರಿಗೆ ರೂ. 1.00 ಲಕ್ಷದ ಅನುದಾನದಂತೆ 30 ಜಿಲ್ಲಾಧಿಕಾರಿಗಳಿಗೆ ಒಟ್ಟು ರೂ. 30,00,000/–ಗಳ ಅನುದಾನವನ್ನು ಬಿಡುಗಡೆ ಮಾಡಲು ಕೋರಿದೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಪ್ರತಿ ಜಿಲ್ಲಾಧಿಕಾರಿಗೆ ರೂ. 1.00 ಲಕ್ಷದಂತೆ 30 ಜಿಲ್ಲಾಧಿಕಾರಿಗಳಿಗೆ ಒಟ್ಟು ರೂ.30.00 ಲಕ್ಷಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಐಟಿಡಿ 38 ಎಂಡಿಎ 2010, ಬೆಂಗಳೂರು, ದಿನಾಂಕ : 11–10–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು **'ಬೆಂಗಳೂರು ಐ.ಟಿ. ಬಿಜ್ – 2010'ರ** ಮೇಳದ ಅಂಗವಾಗಿ **'ಗ್ರಾಮೀಣ ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ'** ಕಾರ್ಯಕ್ರಮವನ್ನು ನಡೆಸಲು ಪ್ರತಿ ಜಿಲ್ಲಾಧಿಕಾರಿಗೆ ರೂ. 1.00 ಲಕ್ಷದಂತೆ ರಾಜ್ಯದ ಎಲ್ಲಾ 30 ಜಿಲ್ಲಾಧಿಕಾರಿಗಳಿಗೆ

ಅನುದಾನವನ್ನು ಬಿಡುಗಡೆ ಮಾಡಲು ಒಟ್ಟು ರೂ. 30,00,000/– ಗಳ (ಮುವ್ವತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ – ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ – 059 – ಇತರೆ ಖರ್ಚು (ಯೋಜನೆ)" ಇದರಡಿಯಲ್ಲಿ** ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರಗಳನ್ನು ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16–5–2008ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2628

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ. ತಿಮ್ಮಣ್ಣ ನಾಯಕ್, 3ನೇ ಅಪರ ಸರ್ಕಾರಿ ಅಭಿಯೋಜಕರು, ಮೈಸೂರು ಇವರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂ:ಲಾ 51 ಪಿಪಿಇ 80, ದಿನಾಂಕ: 02.04.1981,
2) ಸರ್ಕಾರದ ಅಧಿಸೂಚನೆ ಸಂ:ಲಾ 206 ಪಿಪಿಇ 87, ದಿನಾಂಕ: 23.06.1989,
3) ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 146 ಪಿಪಿಇ 95, ದಿನಾಂಕ: 19.08.1995,
4) ಸರ್ಕಾರದ ಆದೇಶ ಸಂ:ಎಫ್‌ಡಿ 31 ಎಸ್‌ಆರ್‌ಪಿ 2007(X), ದಿನಾಂಕ: 14.08.2008,
5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿಪಿಎನ್/ಸಿ ಶಾ.1/98 (6)/ 2008–09, ದಿನಾಂಕ: 29.03.2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ: 02.04.1981ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:19ರನ್ವಯ ಶ್ರೀ ಬಿ.ತಿಮ್ಮಣ್ಣ ನಾಯಕ್, 3ನೇ ಅಪರ ಸರ್ಕಾರಿ ಅಭಿಯೋಜಕರು, ಮೈಸೂರುರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ದಿನಾಂಕ: 05.04.1981ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 23.06.1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 14ರನ್ವಯ ಶ್ರೀ ಬಿ.ತಿಮ್ಮಣ್ಣ ನಾಯಕ್‌ರವರು ಹಿರಿಯ ಸಹಾಯ ಸರ್ಕಾರಿ ಅಭಿಯೋಜಕರು / ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 14.08.1989ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 19.08.1995ರ ಸರ್ಕಾರದ ಅಧಿಸೂಚನೆಯ ಭಾಗ–1ರ ಕ್ರ.ಸಂ:1ರನ್ವಯ ಶ್ರೀ ಬಿ.ತಿಮ್ಮಣ್ಣ ನಾಯಕ್‌ರವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 25.09.1995ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 29.03.2010ರ ಪತ್ರದಲ್ಲಿ, ಮೇಲೆ(1) ರಿಂದ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಗಳನ್ವಯ ಶ್ರೀ ಬಿ.ತಿಮ್ಮಣ್ಣ ನಾಯಕ್‌ರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ರೂ.18150–26925ರ ವೇತನ ಶ್ರೇಣಿಯ ಗ್ರೂಪ್–ಎ ಅಧಿಕಾರಿಯ ಹುದ್ದೆಯಾದ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ದಿನಾಂಕ: 25.09.1995ರ ಪೂರ್ವಾಹ್ನದಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಗೆ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಸಲ್ಲಿಸಿರುತ್ತಾರೆ. ಅವರು ಈ ಹಿಂದಿನ ಯಾವುದೇ ಹುದ್ದೆಯಲ್ಲಿ ಆಯ್ಕೆಕಾಲಿಕ ಶ್ರೇಣಿಯನ್ನಾಗಲಿ, ಹಿರಿಯ ವೇತನ ಶ್ರೇಣಿಯನ್ನಾಗಲಿ ಅಥವಾ ಹೆಚ್ಚುವರಿ ವೇತನ ಬಡ್ತಿಯನ್ನಾಗಲಿ ಪಡೆದಿರುವುದಿಲ್ಲ. ಸದರಿಯವರು ಅವರ ಸೇವಾವಧಿಯಲ್ಲಿ ಯಾವುದೇ ವೇತನ ರಹಿತ / ಅಸಾಧಾರಣ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಿಲ್ಲ. ಅಮಾನತ್ತಿನಲ್ಲಿ ಇಟ್ಟಿರುವುದಿಲ್ಲ ಹಾಗೂ ಕ್ರಿಮಿನಲ್ ಪ್ರಕರಣ ದಾಖಲಾಗಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖೆ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ. ಆದ್ದರಿಂದ, ಮೇಲೆ(4)ರಲ್ಲಿ ಓದಲಾದ ದಿನಾಂಕ: 14.08.2008ರ ಸರ್ಕಾರದ ಆದೇಶದನ್ವಯ, ಆಯ್ಕೆ ದರ್ಜೆ ವೇತನ ಶ್ರೇಣಿಗೆ ಅರ್ಹರಿದ್ದು, ದಿನಾಂಕ: 01.08.2008 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ, ಆದೇಶವನ್ನು ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ದಿನಾಂಕ: 01.08.2008ಕ್ಕೆ ನಿಟಕಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿದೆ. ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಒಇ 125 ಪಿಪಿಇ 2010, ಬೆಂಗಳೂರು, ದಿನಾಂಕ : 13ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಬಿ.ತಿಮ್ಮಣ್ಣ ನಾಯಕ್, 3ನೇ ಅಪರ ಸರ್ಕಾರಿ ಅಭಿಯೋಜಕರು, ಮೈಸೂರು ಇವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಯಲ್ಲಿ ದಿನಾಂಕ: 25.09.1995 ರಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಯ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿಯಿಲ್ಲದೇ ಪೂರೈಸಿರುವುದರಿಂದ, ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 31 ಎಸ್‌ಆರ್‌ಪಿ 2007(X), ದಿನಾಂಕ: 14.08.2008ರ ಅನುಸಾರ ದಿನಾಂಕ: 01.08.2008 ರಿಂದ ಅನ್ವಯಿಸುವಂತೆ ರೂ.19050-27600ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 2629

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್.ಎಸ್.ಪಾಟೀಲ್, 2ನೇ ಅಪರ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ ಇವರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂ:ಲಾ 229 ಪಿಪಿಇ 81, ದಿನಾಂಕ: 24.02.1982,
2) ಸರ್ಕಾರದ ಅಧಿಸೂಚನೆ ಸಂ:ಲಾ 206 ಪಿಪಿಇ 87, ದಿನಾಂಕ: 27.12.1989,
3) ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 112 ಪಿಪಿಇ 97, ದಿನಾಂಕ: 12.06.1998,
4) ಸರ್ಕಾರದ ಆದೇಶ ಸಂ:ಎಫ್‌ಡಿ 31 ಎಸ್‌ಆರ್‌ಪಿ 2007(X), ದಿನಾಂಕ: 14.08.2008,
5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿಪಿಎನ್/ಸಿಶಾ.1 /98(05)/ 2008-09, ದಿನಾಂಕ: 29.03.2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ: 24.02.1982ರ ಸರ್ಕಾರದ ಅಧಿಸೂಚನೆ-Iಯ ಕ್ರ.ಸಂ:9ರನ್ವಯ ಶ್ರೀ ಎಸ್.ಎಸ್.ಪಾಟೀಲ್, 2ನೇ ಅಪರ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರರವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ದಿನಾಂಕ: 05.03.1982ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 27.12..1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 3ರನ್ವಯ ಶ್ರೀ ಎಸ್.ಎಸ್.ಪಾಟೀಲ್, ಹಿರಿಯ ಸಹಾಯ ಸರ್ಕಾರಿ ಅಭಿಯೋಜಕರು / ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 19.01.1990ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (3)ರಲ್ಲಿ) ಓದಲಾದ ದಿನಾಂಕ: 12.06.1998ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:2ರನ್ವಯ ಶ್ರೀ ಎಸ್.ಎಸ್.ಪಾಟೀಲ್‌ರವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 17.08.1998ರ ಪೂವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 29.03.2010ರ ಪತ್ರದಲ್ಲಿ, ಮೇಲೆ(1) ರಿಂದ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಗಳನ್ವಯ ಶ್ರೀ ಎಸ್.ಎಸ್.ಪಾಟೀಲ್‌ರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ರೂ.18150-26925ರ ವೇತನ ಶ್ರೇಣಿಯ ಗ್ರೂಪ್-ಎ ಅಧಿಕಾರಿಯ ಹುದ್ದೆಯಾದ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ದಿನಾಂಕ: 17.08.1998ರ ಪೂರ್ವಾಹ್ನದಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಗೆ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಸಲ್ಲಿಸಿರುತ್ತಾರೆ. ಸದರಿಯವರು ಅವರ ಹುದ್ದೆಗಿಂತ ಮುಂದಿನ ಹುದ್ದೆಯಾದ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಬಡ್ತಿ ಹೊಂದಲು ಅರ್ಹರಿರುತ್ತಾರೆ. ಅವರು ಈ ಹಿಂದಿನ ಯಾವುದೇ ಹುದ್ದೆಯಲ್ಲಿ ಆಯ್ಕೆಕಾಲಿಕ ಶ್ರೇಣಿಯನ್ನಾಗಲಿ, ಹಿರಿಯ ವೇತನ ಶ್ರೇಣಿಯನ್ನಾಗಲಿ ಅಥವಾ ಹೆಚ್ಚುವರಿ ವೇತನ ಬಡ್ತಿಯನ್ನಾಗಲಿ ಪಡೆದಿರುವುದಿಲ್ಲ. ಸದರಿಯವರು ಅವರ ಸೇವಾವಧಿಯಲ್ಲಿ ಯಾವುದೇ ವೇತನ ರಹಿತ / ಅಸಾಧಾರಣ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗುವುದಿಲ್ಲ. ಅಮಾನತ್ತಿನಲ್ಲಿ ಇಟ್ಟಿರುವುದಿಲ್ಲ ಹಾಗೂ ಕ್ರಿಮಿನಲ್ ಪ್ರಕರಣ ದಾಖಲಾಗಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖೆ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ. ಆದ್ದರಿಂದ, ಮೇಲೆ(4)ರಲ್ಲಿ ಓದಲಾದ ದಿನಾಂಕ: 14.08.2008ರ ಸರ್ಕಾರದ ಆದೇಶದನ್ವಯ, ಆಯ್ಕೆ ದರ್ಜೆ ವೇತನ ಶ್ರೇಣಿಗೆ ಅರ್ಹರಿದ್ದು, ದಿನಾಂಕ: 01.08.2008 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ, ಆದೇಶವನ್ನು ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ದಿನಾಂಕ: 01.08.2008ಕ್ಕೆ ನಿಟಕಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿದೆ. ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಒಇ 108 ಪಿಪಿಇ 2010, ಬೆಂಗಳೂರು, ದಿನಾಂಕ : 13ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಎಸ್.ಎಸ್.ಪಾಟೀಲ್, 2ನೇ ಅಪರ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ ಇವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಯಲ್ಲಿ ದಿನಾಂಕ: 17.08.1998 ರಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಯ ನಿರಂತರ

ಸೇವೆಯನ್ನು ಯಾವುದೇ ಮುಂಬಡ್ತಿಯಿಲ್ಲದೇ ಪೂರೈಸಿರುವುದರಿಂದ, ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 31 ಎಸ್‌ಆರ್‌ಪಿ 2007(X), ದಿನಾಂಕ: 14.08.2008ರ ಅನುಸಾರ ದಿನಾಂಕ: 01.08.2008 ರಿಂದ ಅನ್ವಯಿಸುವಂತೆ ರೂ.19050-27600ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 2630 ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜೆ. ಐ. ಕಿತ್ತೂರು, ಕಾನೂನು ಅಧಿಕಾರಿ (ಜಂಟಿ ಅಭಿಯೋಗ ನಿರ್ದೇಶಕರು), ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಕಛೇರಿ, ಬೆಂಗಳೂರು ಇವರಿಗೆ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಅಧಿಸೂಚನೆ ಸಂ:ಲಾ 66 ಪಿಪಿಇ 78, ದಿನಾಂಕ: 25.06.1979,
2) ಸರ್ಕಾರದ ಅಧಿಸೂಚನೆ ಸಂ:ಲಾ 91 ಪಿಪಿಇ 86, ದಿನಾಂಕ: 27.05.1986,
3) ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 221 ಪಿಪಿಇ 91, ದಿನಾಂಕ: 20.07.1992,
4) ಸರ್ಕಾರದ ಆದೇಶ ಸಂ:ಎಫ್‌ಡಿ 31 ಎಸ್‌ಆರ್‌ಪಿ 2007(X), ದಿನಾಂಕ: 14.08.2008,
5) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿಪಿಎನ್/ಸಿಶಾ.1 /98(09)/ 2008-09, ದಿನಾಂಕ: 29.03.2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ: 25.06.1979ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:22ರನ್ವಯ ಶ್ರೀ ಜೆ.ಐ. ಕಿತ್ತೂರು, ಕಾನೂನು ಅಧಿಕಾರಿ (ಜಂಟಿ ಅಭಿಯೋಗ ನಿರ್ದೇಶಕರು), ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಕಛೇರಿ, ಬೆಂಗಳೂರುರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ದಿನಾಂಕ: 10.07.1979ರ ಅಪರಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 27.05.1986ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 7ರನ್ವಯ ಶ್ರೀ ಜೆ.ಐ. ಕಿತ್ತೂರುರವರು ಹಿರಿಯ ಸಹಾಯ ಸರ್ಕಾರಿ ಅಭಿಯೋಜಕರು / ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 27.06.1986ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 20.07.1992ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:1ರನ್ವಯ ಶ್ರೀ ಜೆ. ಐ. ಕಿತ್ತೂರುರವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಹೊಂದಿ, ದಿನಾಂಕ: 06.08.1992ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 08.04.2010ರ ಪತ್ರದಲ್ಲಿ, ಮೇಲೆ(1) ರಿಂದ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಗಳನ್ವಯ ಶ್ರೀ ಜೆ.ಐ.ಕಿತ್ತೂರುರವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು, ರೂ.18150-26925ರ ವೇತನ ಶ್ರೇಣಿಯ ಗ್ರೂಪ್-ಎ ಅಧಿಕಾರಿಯ ಹುದ್ದೆಯಾದ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ದಿನಾಂಕ: 06.08.1992ರ ಪೂರ್ವಾಹ್ನದಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಗೆ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಸಲ್ಲಿಸಿರುತ್ತಾರೆ. ಸದರಿಯವರು ದಿನಾಂಕ: 30.06.2009 ರಿಂದ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ಬಡ್ತಿ ಹೊಂದಿ ಕಾರ್ಯ ನಿರ್ವಹಿಸುತ್ತಿರುತ್ತಾರೆ. ಅವರು ಈ ಹಿಂದಿನ ಯಾವುದೇ ಹುದ್ದೆಯಲ್ಲಿ ಆಯ್ಕೆಕಾಲಿಕ ಶ್ರೇಣಿಯನ್ನಾಗಲಿ, ಹಿರಿಯ ವೇತನ ಶ್ರೇಣಿಯನ್ನಾಗಲಿ ಅಥವಾ ಹೆಚ್ಚುವರಿ ವೇತನ ಬಡ್ತಿಯನ್ನಾಗಲಿ ಪಡೆದಿರುವುದಿಲ್ಲ. ಸದರಿಯವರು ಅವರ ಸೇವಾವಧಿಯಲ್ಲಿ ಯಾವುದೇ ವೇತನ ರಹಿತ / ಅಸಾಧಾರಣ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಿಲ್ಲ. ಅಮಾನತ್ತಿನಲ್ಲಿ ಇಟ್ಟಿರುವುದಿಲ್ಲ ಹಾಗೂ ಕ್ರಿಮಿನಲ್ ಪ್ರಕರಣ ದಾಖಲಾಗಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖೆ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ. ಆದ್ದರಿಂದ, ಮೇಲೆ(4)ರಲ್ಲಿ ಓದಲಾದ ದಿನಾಂಕ: 14.08.2008ರ ಸರ್ಕಾರದ ಆದೇಶದನ್ವಯ, ಆಯ್ಕೆ ದರ್ಜೆ ವೇತನ ಶ್ರೇಣಿಗೆ ಅರ್ಹರಿದ್ದು, ದಿನಾಂಕ: 01.08.2008 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿ, ಆದೇಶವನ್ನು ಹೊರಡಿಸಲು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಸದರಿ ಅಧಿಕಾರಿಯವರಿಗೆ ಸಂಬಂಧಿಸಿದಂತೆ ದಿನಾಂಕ: 01.08.2008ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳನ್ನು ಪರಿಶೀಲಿಸಿದೆ. ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಒಇ 127 ಪಿಪಿಇ 2010, ಬೆಂಗಳೂರು, ದಿನಾಂಕ : 13ನೇ ಅಕ್ಟೋಬರ್ 2010**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಜೆ.ಐ.ಕಿತ್ತೂರು, ಕಾನೂನು ಅಧಿಕಾರಿ (ಜಂಟಿ ಅಭಿಯೋಗ ನಿರ್ದೇಶಕರು), ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಕಛೇರಿ, ಬೆಂಗಳೂರು ಇವರು ಸರ್ಕಾರಿ ಅಭಿಯೋಜಕರು / ಅಭಿಯೋಗ ಉಪ ನಿರ್ದೇಶಕರ ಹುದ್ದೆಯಲ್ಲಿ ದಿನಾಂಕ: 06.08.1992 ರಿಂದ 8 ವರ್ಷಗಳಿಗೂ ಹೆಚ್ಚಿನ ಅವಧಿಯ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿಯಿಲ್ಲದೇ ಪೂರೈಸಿರುವುದರಿಂದ, ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 31 ಎಸ್‌ಆರ್‌ಪಿ 2007(X), ದಿನಾಂಕ: 14.08.2008ರ ಅನುಸಾರ ದಿನಾಂಕ: 01.08.2008 ರಿಂದ ಅನ್ವಯಿಸುವಂತೆ ರೂ.19050-27600ರ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 2631 ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)